## ಶ್ರೀ ಶ್ರೀ ಉದ್ದಾನ ಶಿವಯೋಗಿಗಳ 47ನೆಯ ಪುಣ್ಯಾರಾಧನೆ

ಮತ್ತು

### ಗ್ರಾಮಾಂತರ ಬಸವ ಜಯಂತಿ ಸಮಾರೋಪ ಸಮಾರಂಭ

ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ – 572104,

ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ **ಡಾ|| ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳ** ದಿವ್ಯ ಸಮ್ಮುಖ-ದಲ್ಲಿ ಈ ಸಮಾರಂಭಗಳು ನಡೆಯುತ್ತವೆ.

* ದಿನಾಂಕ :– ಜನವರಿ 11 ಮತ್ತು 12, 1988
* ಶ್ರೀ ಸಿದ್ಧಗಂಗಾ ಮಠದ ಭವಿಷ್ಯದ ಜ್ಯೋತಿಯನ್ನು ಬೆಳಗಿಸಿದ ಮಹಾ-ಮಹಿಮರಾದ **ಶ್ರೀ ಉದ್ದಾನ ಶಿವಯೋಗಿಗಳ** ಆರಾಧನೆಯನ್ನು ಆಚರಿಸುವ ಮೂಲಕ ಅವರ ಪುಣ್ಯ ಸ್ಮರಣೆ.
* ಶ್ರೀ ಮಠವು ಕಳೆದ 9 ವರ್ಷಗಳಿಂದ ನಡೆಸಿಕೊಂಡು ಬರುತ್ತಿರುವ ಮಹಾ ಮಾನವತಾವಾದಿ, ಭಕ್ತಿ ಭಂಡಾರಿ ಮಂಗಳ ದೀಪಕ, ಸಕಲರಿಗೆ ಲೇಸನ್ನೇ ಬಯಸಿದ ಗ್ರಾಮಾಂತರ ಬಸವ ಜಯಂತಿ ಉತ್ಸವದ ಸಮಾರೋಪ ಸಮಾರಂಭ.
* ಈ ಎರಡೂ ಸಮಾರಂಭಗಳು ವೈಶಿಷ್ಟ್ಯ ಪೂರ್ಣವಾಗಿದ್ದು ಒಂದ-ಕ್ಕೊಂದಕ್ಕೆ ಪೂರಕವಾಗಿವೆ.
* ಪ್ರತಿಭಾನ್ವಿತ ವಿದ್ವಾಂಸರುಗಳು ಬೋಧಪ್ರದವಾದ ಉಪನ್ಯಾಸಗಳನ್ನು ನೀಡಲಿದ್ದಾರೆ.
* ನಾಡಿನ ಅನೇಕ ಮಠಾಧೀಶ್ವರುಗಳು ಈ ಸಮಾರಂಭಗಳಲ್ಲಿ ಭಾಗಿಗಳಾ-ಗುತ್ತಾರೆ.
* ನಮ್ಮ ಜೀವನವನ್ನು ಉದಾತ್ತಗೊಳಿಸಿಕೊಳ್ಳಲು ಸಮಾರಂಭ ಸ್ಫೂರ್ತಿ ನೀಡುತ್ತದೆ.
* ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಶ್ರೀ ಮಠದ ಭಕ್ತಾದಿಗಳು, ಅಭಿಮಾನಿ-ಗಳು, ಹಳೆಯ ವಿದ್ಯಾರ್ಥಿಗಳು ಮತ್ತು ಹಿತೈಷಿಗಳು ಈ ಸಮಾರಂಭದಲ್ಲಿ ಭಾಗಿಗಳಾಗಬೇಕಾಗಿ ಕೋರುತ್ತೇವೆ.

ಭಕ್ತ ಮಂಡಳಿ
ಶ್ರೀ ಸಿದ್ಧಗಂಗಾ ಮಠ.

# ಸಿದ್ಧಗಂಗಾ

ಸಂಪುಟ-೨೩ ಸಂಚಿಕೆ-೧೨ ಡಿಸೆಂಬರ್, ೧೯೮೭

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕಾಮವ ನೀ ತೊರೆದು ಕಾವಿಯ ಧರಿಸಿದೆ
ಕಾಮ ಕಸ್ತೂರಿಯೆನಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ದಾನ–ದಾಸೋಹಗಳ ಅಂತರವ ತಿಳಿಸಿದೆ
ದೀನ–ದಲಿತರನು ಕೈ ಹಿಡಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಕರ್ಮ–ಕಾಯಕಗಳ ಸಂದ ನೀ ಬಿಡಿಸಿದೆ
ಧರ್ಮ–ಕರ್ಮಗಳ ನೀನೊರೆದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್. ವಿ. ವೀರಭದ್ರಯ್ಯ.

# ಈ ಸಂಚಿಕೆಯಲ್ಲಿ





# ಶ್ರೀವಾಣಿ

## ಕಾಯಕ

ನಿಷ್ಕಾಮ ಬುದ್ಧಿಯಿಂದ ಕರ್ತವ್ಯ ಮಾಡಬೇಕೆಂಬುದೇ ಕಾಯಕದ ಮುಖ್ಯ ತತ್ವವು. ಪ್ರಪಂಚದಲ್ಲಿರುವ ಭೋಗ್ಯವಸ್ತುಗಳೆಲ್ಲವೂ ನಾವು ಅವುಗಳನ್ನು ಬಳಸುವ ಭಾವದಿಂದ, ಉಪಯೋಗಿಸತಕ್ಕ ರೀತಿಯಿಂದ ಸಾಧಕ ಅಥವಾ ಬಾಧಕವಾಗುತ್ತವೆ. ಅವುಗಳನ್ನು ಆಸೆಯಿಂದ, ಆಸಕ್ತಿಯಿಂದ ಸ್ವೀಕರಿಸಿದರೆ ಬಾಧಕವಾಗುತ್ತವೆ. ಆಸೆಯು ದಾಸ್ಯತ್ವದ ಕುರುಹು. ಆಶಾಬಂಧನವು ಕೋಮಲವಾದರೂ ಎಂಥ ಕಠಿಣ ಹೃದಯಗಳನ್ನಾದರೂ ಬಂಧಿಸಬಲ್ಲುದು. ಮಹಾ ಪುರುಷರೆಲ್ಲರೂ ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿದ್ದರಿಂದಲೇ ಗಮ್ಯವನ್ನು ಮುಟ್ಟಿದರು. ತ್ಯಾಗವೇ ಅವರ ವಿಜಯಕ್ಕೆ ಮೂಲ. ತ್ಯಾಗದಲ್ಲಿಯೇ ಮಹಾ ಜೀವನದ ಉಗಮ. ಕಾಯಕವು ಪ್ರತಿ ಫಲಾಪೇಕ್ಷೆಯಿಲ್ಲದೆ ಮಾಡಲ್ಪಡ ಬೇಕೆಂಬುದೇ ಶರಣರ ತತ್ವವು. ಗೀತಾಚಾರ್ಯರೂ ಹೀಗೆಯೇ "ಕರ್ಮಣ್ಯೇವಾಧಿಕಾರಸ್ತೇಮಾಫಲೇಷು ಕದಾಚನ" ಎಂದಿದ್ದಾರೆ.

'ಫಲದಾಶೆ ಮಾಡುವುದು ಕ್ರಿಯೆಯಲ್ಲ ಅದೇನು ಕಾರಣವೆಂದಡೆ:<br>
ಬಯಕೆಯ ಭಕ್ತಿಯ ಪೂರ್ವಪುರಾತನರು ಮೆಚ್ಚರು.<br>
ನಮ್ಮ ಅಖಂಡೇಶ್ವರ ದೇವರು ಹಂಗಿನ ಭಕ್ತಿಯ ನೊಲ್ಲ ನೋಡಾ'

ಫಲಾಶಾರಹಿತ ಕರ್ಮವೇ ಶ್ರೇಷ್ಠವು. ಕಾಮಬುದ್ಧಿಯಿಂದ ಮಾಡಿದ ಕರ್ಮವು ಉದ್ದಿಷ್ಟ ಫಲವು ದೊರಕದಿರುವಾಗ. ನಮ್ಮನ್ನು ದುಃಖಿ ಕ್ಕೊಳಗು ಮಾಡುತ್ತದೆ. ಕಾಮಬುದ್ಧಿಯಿಂದ ಮಾಡಿದ ಯಾವುದೇ ಕರ್ಮವು ದೇವರಿಗೆ ಮುಟ್ಟದು. ಆದ್ದರಿಂದ ಕರ್ಮಬಂಧವು ನಿವೃತ್ತಿಯಾಗುವುದಿಲ್ಲ. ಆದುದರಿಂದಲೇ ಬಯಕೆಯ ಭಕ್ತಿಯೂ, ಕಾಮ್ಯ ಕಾಯವೂ, ಫಲಾಶೆಯುಳ್ಳ ಕರ್ಮವೂ ತ್ಯಾಜ್ಯವು. ನಿಜವಾದ ಕರ್ಮಯೋಗಿಯು ಸರ್ವಸ್ವವನ್ನೂ ಪರಮಾತ್ಮನಿಗೆ ಅರ್ಪಿಸಿ ನಿಷ್ಕಾಮನಾಮತಿಯುಳ್ಳವನಾಗಿ ಕರ್ತವ್ಯ ದೃಷ್ಟಿಯಿಂದ ತನ್ನ ಕರ್ಮವನ್ನು ಮಾಡುವನು. ಮುಕ್ತಿಯ ಬಯಕೆಯೂ ಸಹ ಅತನಿಗಿರುವುದಿಲ್ಲ.

ಪರಮ ಪದವಿಯ ನಿಮ್ಮ ಕೊರಳಲ್ಲಿ ಕಟ್ಟಿಕೊಳ್ಳಿ ;<br>
ಪರಮ ಪದವಿಯ ನಿಮ್ಮ ಎದೆಯಲ್ಲಿ ಇರಿದುಕೊಳ್ಳಿ ;<br>
ಪರಮ ಪದವಿಯ ನಿಮ್ಮ ತಲೆಯಲ್ಲಿ ಸುತ್ತಿಕೊಳ್ಳಿ ;<br>
ನಿಮ್ಮ ತೊತ್ತು ಸೇವೆಯೇ ಸಾಕು ಎನಗೆ –

– ಮಹಾಲಿಂಗ ಕಲ್ಲೇಶ್ವರದೇವ

**ಸಿದ್ಧಗಂಗಾ ಮಾಸ ಪತ್ರಿಕೆ**

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು

ಪ್ರಾ॥ ಚನ್ನಪ್ಪ ಎರೇಸೀಮೆ

* * *

ಸಂಪಾದಕರು

ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು

ಬಿ. ವೀರಭದ್ರಯ್ಯ

ಪಿ. ಎನ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

**ಚಂದಾ ವಿವರ**

ವಾರ್ಷಿಕ ಚಂದಾ 20 - 00 ರೂ

ಅಜೀವ ಸದಸ್ಯತ್ವ 201 - 00 ರೂ

**ಲೇಖಕರಲ್ಲಿ ಮನವಿ**

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ, ಸಿದ್ಧಗಂಗಾ ಆಗಿಂದಾಗ್ಗೆ ನಿಗದಿಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

**" ಸಂಪಾದಕರು "**

**'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ**

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ



# ಸಂಪಾದಕೀಯ

## ಪತ್ರಿಕೆಗಳು

ಪ್ರಜಾಪ್ರಭುತ್ವದ ಅವಿಭಾಜ್ಯ ಅಂಗ ಪತ್ರಿಕೆಗಳು. ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗಗಳಂತೆಯೇ ಅನಿವಾರ್ಯವಾದ ಅಂಗ ಪತ್ರಿಕಾರಂಗ. ಸರ್ಕಾರವನ್ನು, ಸಮಾಜವನ್ನು ತಿದ್ದುವಲ್ಲಿ ಅವುಗಳ ಹೊಣೆ ಅಮೂಲ್ಯವಾದದ್ದು. ವರ್ತಮಾನದ ಕೈಗನ್ನಡಿಗಳು ಪತ್ರಿಕೆಗಳು, ಪ್ರಜಾಕ್ಷೇಮವನ್ನು ಸದಾ ಚಿಂತಿಸುವ ಸೇವಾ ಸಂಪುಟಗಳು. ರಾಷ್ಟ್ರಪಿತ ಗಾಂಧೀಜಿಯಂಥವರು ಪತ್ರಿಕಾ ರಂಗದಲ್ಲಿ ಸೇವೆಸಲ್ಲಿಸಿದರು. ಅಂತೆಯೇ ಅನೇಕ ದೇಶಭಕ್ತರು, ಮಾನವ ಹಿತಚಿಂತಕರು ಪತ್ರಿಕಾ ಕ್ಷೇತ್ರದಲ್ಲಿ ಅರ್ಪಣಾ ಮನೋಭಾವದಿಂದ ದುಡಿದ ಜ್ವಲಂತ ಉದಾಹರಣೆಗಳು ನಮ್ಮೆದುರಿಗಿವೆ ಅವರೆಲ್ಲ ತಮ್ಮ ಬರವಣಿಗೆ ಮುದ್ರಣಕ್ಕೆ ಹೋಗುವ ಮುನ್ನ ಆಳವಾಗಿ ಆಲೋಚಿಸದೆ, ತಮ್ಮ ಲೇಖನಗಳ ಸಾಧಕ - ಬಾಧಕಗಳನ್ನು ತೂಗಿ ನೋಡದೆ ಪುನರ್ ಪರಿಶೀಲಿಸದೆ ಪ್ರಕಟಿಸುತ್ತಿರಲಿಲ್ಲ. ಅವರು ತಮ್ಮ ಕಣ್ಣ ಮುಂದೆ ದೊಡ್ಡದನ್ನೇ ಇಟ್ಟುಕೊಂಡು ನೋಡಿದರು. ಒಬ್ಬ ವ್ಯಕ್ತಿಯ ವಿಷಯದಲ್ಲಾಗಲಿ, ಒಂದು ಸಂಸ್ಥೆಯ ವಿಷಯದಲ್ಲಾಗಲಿ, ಒಂದು ಘಟನೆಯ ವರದಿಯಲ್ಲಾಗಲಿ, ಪ್ರಕಟಿಸುವಾಗ ಗಂಭೀರವಾಗಿ ಪರ್ಯಾಲೋಚಿಸುತ್ತಿದ್ದರು. ತಮ್ಮ ವಿಚಾರ ಪ್ರಣಾಲಿಯನ್ನು ಸೂಕ್ತವಾದ ಭಾಷೆಯಲ್ಲಿ ಸಂಯಮವನ್ನು ಕಳೆದು ಕೊಳ್ಳದ ಹಾಗೆ ಪ್ರಕಟಿಸುತ್ತಿದ್ದರು. ಅವರ ಸೇವೆಯಿಂದ ಪತ್ರಿಕಾ ರಂಗಕ್ಕೆ ಸಂದ ಗೌರವ, ಬಂದ ಪ್ರತಿಷ್ಠೆ ಹೆಮ್ಮೆ ಪಡುವಂಥದು.

ಆದರೆ, ಇಂದು ಬಹುತೇಕ ಪತ್ರಿಕೆಗಳು ಅಂಥ ಸ್ಥಾನದಿಂದ ಕೆಳಗಿಳಿಯುತ್ತಿರುವುದು ಪ್ರಜಾಪ್ರಭುತ್ವದ ಬಹುದೊಡ್ಡ ದುರಂತ. ರಾಜಕಾರಣಕ್ಕೆ ಅಡುಂಬೊಲವಾಗಿ ಬೆಳೆಯುತ್ತಿವೆ. ಪತ್ರಿಕಾ ಧರ್ಮವನ್ನರಿಯದವರೆಷ್ಟೋ ಮಂದಿ ಇಂದು ಪತ್ರಿಕೋದ್ಯಮದಲ್ಲಿ ತೊಡಗಿದ್ದಾರೆ. ರೋಚಕ ಸುದ್ದಿ ನಿರ್ಮಾಣ, ಅಸಭ್ಯಚಿತ್ರಗಳು, ಅಸೌಜನ್ಯಯುತವಾದ ಭಾಷೆ, ವ್ಯಾಕರಣ, ವಾಕ್ಯರಚನೆಯೇ ಗೊತ್ತಿಲ್ಲದ ವಿಧಾನ, ಮಿಗಿಲಾಗಿ ಯುವ ಜನಾಂಗದ ದೂಷಣದಲ್ಲಿ ಅನುಸರಿಸುತ್ತಿರುವ ಅಪಕ್ವ ರೀತಿಗಳಿಂದಾಗಿ ಪತ್ರಿಕೆಗಳನ್ನು ಓದುಗ ಕೆಳಗಣ್ಣಿನಿಂದ ನೋಡುವಂತಾಗುತ್ತಿದೆ. ಅನೌಪಚಾರಿಕ ಶಿಕ್ಷಣ ನೀಡುವ ಪತ್ರಿಕೆಗಳು ಸದಾ ತಮ್ಮ ಕಣ್ಮುಂದೆ ಮಾನವ ಕ್ಷೇಮವನ್ನು, ಉಳಿಸಿಕೊಳ್ಳುವುದು ಆದರ್ಶನೀಯ. ಎಲ್ಲ ಪತ್ರಿಕೆಗಳು ಹೀಗಾಗುತ್ತಿವೆ ಎಂದಲ್ಲ, ಕೆಲವು ಪತ್ರಿಕೆಗಳು ಹಿಡಿದಿರುವ ಮಾರ್ಗ ಸೇವಾ ಮನೋಭಾವದಿಂದ ಇಲ್ಲ ಎಂಬುದನ್ನ ವಿಚಾರವಂತರೆಲ್ಲ ಒಪ್ಪ ಬೇಕಾಗುತ್ತದೆ.

# ಶ್ರೀ ಸಿದ್ಧಗಂಗಾ ಮಠ

### ತುಮಕೂರು – ಕರ್ನಾಟಕ

## ಪ್ರಕಟಣೆ

ದಿನಾಂಕ:6.12 1987 ರ ವಾರಪತ್ರಿಕೆಯ 'ಚುಚ್ಚು ಮದ್ದು' ಅಂಕಣದಲ್ಲಿ "ನಿವೃತ್ತಿಯಾಗಲು ಶ್ರೀ ಶಿವಕುಮಾರ ಸ್ವಾಮಿಗಳ ನಿರ್ಧಾರ" ಎನ್ನುವ ಶಿರೋನಾಮೆಯಲ್ಲಿ ಪ್ರಕಟವಾಗಿರುವ ಲೇಖನವನ್ನು ಗಮನಿಸಿದ್ದೇವೆ. ಶ್ರೀ ಮಠವು ಮಾಡುತ್ತಿರುವ ಲೋಕ ಕಲ್ಯಾಣಕಾರಕವಾದ ಸೇವೆಯನ್ನು ಅರ್ಥ ಮಾಡಿಕೊಳ್ಳಲಾಗದ ಕೇವಲ ಕೆಲವೇ ಜನರು ಶ್ರೀ ಮಠದ ಕೀರ್ತಿಗೆ ಕಳಂಕ ತರಬೇಕೆಂಬ ಹಂಬಲದಿಂದ ಬರೆದಂತಹ ಲೇಖನ ಇದು ಎಂಬುದನ್ನು ಸಾರ್ವಜನಿಕರ ಗಮನಕ್ಕೆ ತರಲಿಚ್ಛಿಸುತ್ತೇವೆ. ಪರಮ ಪೂಜ್ಯರಾದ ನಮ್ಮ ಶ್ರೀ ಉದ್ದಾನ ಶಿವಯೋಗಿಗಳು ನಮಗೆ ಶ್ರೀ ಮಠದ ಜವಾಬ್ದಾರಿಯನ್ನು ವಹಿಸಿದಂದಿನಿಂದ ಇಂದಿನವರೆಗೆ ಸಂಸ್ಥೆಯ ಅಭಿವೃದ್ಧಿಗಾಗಿ ಶ್ರಮಿಸುತ್ತ ಬಂದಿದ್ದರಿಂದ ಇಂದು ಶ್ರೀ ಮಠ ಬೃಹತ್ತಾಗಿ ಬೆಳೆಯಲು ಕಾರಣವಾಯಿತು. ನಾವು ಸೇವಾದೀಕ್ಷೆಯನ್ನು ಸ್ವೀಕರಿಸಿದ ದಿನ ಸಂಸ್ಥೆ ತುಂಬಾ ಚಿಕ್ಕ ಪ್ರಮಾಣದಲ್ಲಿ ಸೇವೆ ಸಲ್ಲಿಸುತ್ತಿದ್ದು ಇಂದು ನಾಲ್ಕು ಸಾವಿರ ವಿದ್ಯಾರ್ಥಿಗಳು ಮತ್ತು 75 ಶಿಕ್ಷಣ ಸಂಸ್ಥೆಗಳು ಕಾರ್ಯಶೀಲವಾಗುವಂತೆ ಗುರು ಕೃಪೆ ನಡೆಸಿದೆ. ತುಮಕೂರಿನ ವರ್ತಕ ಬಂಧುಗಳು, ಶ್ರೀ ಮಠದ ಅಧ್ಯಾಪಕ ಮತ್ತು ಸಿಬ್ಬಂದಿವರ್ಗದವರ ನಿಸ್ಪೃಹ ಸೇವೆ ಸಹಕಾರಗಳು ಸಂಸ್ಥೆಯ ಪ್ರಗತಿಗೆ ಕಾರಣವಾದವು. ತುಮಕೂರಿನ ವರ್ತಕರು ಶ್ರೀ ಮಠದ ಅಧ್ಯಾಪಕರು ಮತ್ತು ಸಿಬ್ಬಂದಿ ವರ್ಗದವರು ಮಠದ ಹಣವನ್ನು ದೋಚುತ್ತಿದ್ದಾರೆ, ಊಟ ಮಾಡುತ್ತಿದ್ದಾರೆ ಎಂಬುದಾಗಿ ಅಪಾದಿಸುತ್ತಿರುವುದು ಸತ್ಯದೂರವಾದುದು. ಅವರ ಹಲವಾರು ವಿಧದ ಸೇವೆ, ಸಹಕಾರಗಳಿಂದ ಶ್ರೀ ಮಠ ಅಭಿವೃದ್ಧಿಗೆ ಬಂದಿರುವುದನ್ನು ಇಲ್ಲಿ ಸ್ಮರಿಸಬೇಕಾಗಿದೆ. ಹೀಗಿರುವಾಗ ನಮ್ಮ ಕಿವಿಯಲ್ಲಿ "ಏನೇನೋ ಊದುವಂಥಹ, ಹಣ ತಿಂದು ತೇಗುವಂಥಹ ಜನ" ನಮ್ಮ ಸನಿಹದಲ್ಲಿ ಇದ್ದಾರೆ ಎಂದು ಪ್ರಕಟವಾದ ಲೇಖನದಲ್ಲಿ ಹೇಳಲಾಗಿದೆ. ಅಂಥವರು ಯಾರೂ ನಮ್ಮ ಬಳಿಯಲ್ಲಿ ಇಲ್ಲ. ಹಾಗೆ ಇನ್ನೊಬ್ಬರ ಮಾತಿಗೆ ಬೆಲೆಕೊಟ್ಟು ಸತ್ಯಾಸತ್ಯತೆಯನ್ನು ಅರಿಯದೆ ಕಾರ್ಯ ಪ್ರವೃತ್ತರಾಗಿದ್ದರೆ ಶ್ರೀ ಮಠವನ್ನು ಇಷ್ಟು ಬೃಹತ್ತಾಗಿ ರೂಪಿಸಲಾಗುತ್ತಿತ್ತೇ ಎಂಬುದನ್ನು ನಾಡಿನ ಜನತೆ ಯೋಚಿಸಬೇಕು.

ಗೌರೀಶಂಕರರು ಶ್ರೀ ಮಠದ ಯಾವುದೇ ಕಾರ್ಯಕ್ರಮಗಳಲ್ಲಿ ಕಿಂಚಿತ್ತು ಭಾಗಿಯಾಗುತ್ತಿಲ್ಲ. ಶ್ರೀ ಮಠದ ದಾಸೋಹ ನಾಲ್ಕು ಸಾವಿರ ವಿದ್ಯಾರ್ಥಿಗಳ ಕ್ಷೇಮ ಚಿಂತನೆ, ಮತ್ತು ಶಿಕ್ಷಣ ಸಂಸ್ಥೆಗಳ ಕಾಯಕ ಸುಗಮವಾಗಿ ನಡೆಯುತ್ತಿವೆ. ಆದರಿಂದ "ಗಂಡ ಹೆಂಡಿರ ಜಗಳದಲ್ಲಿ ಕೂಸು ಬಡವಾಗುವ ಪ್ರಶ್ನೆಯೇ ಇಲ್ಲ."

"ಇನ್ನು ಮೂರು ತಿಂಗಳಲ್ಲಿ ನಾವು ನಿವೃತ್ತಿಯಾಗುತ್ತೇವೆ" ಎಂಬುದು ಸುಳ್ಳು ವರದಿಯಾಗಿರುತ್ತದೆ. ನಮ್ಮ ಜೀವನ ಪರ್ಯಂತ ಕಾಯಕ ನಿರತರಾಗಿರುವುದೇ ನಾವು ಮಾಡುವ ಲಿಂಗಪೂಜೆ, ಗುರುಪೂಜೆ, ಕಾಯಕದಿಂದ ನಿವೃತ್ತಿಯಾಗುವ ಮಾತೇ ಇಲ್ಲ.

ಶ್ರೀ ಮಠಕ್ಕೆ ಪವಿತ್ರ ಗುರು-ಶಿಷ್ಯ ಪರಂಪರೆ ಪೂಜ್ಯ ವ್ಯಕ್ತಿತ್ವ, ಸತ್ಸಂಗ, ಸಚ್ಚಾರಿತ್ರ್ಯವೇ ಆಸ್ತಿ

ಈ ಪರಂಪರೆ ಮುಂದುವರಿಯಲು ಸಹಾಯಕವಾಗುವಂತೆ ಪ್ರಕೃತ ಸಮಸ್ಯೆಯನ್ನು ಬಗೆಹರಿಸಲು ಸೂಕ್ತ ನಿರ್ಧಾರವನ್ನು ಶೀಘ್ರವಾಗಿ ಪ್ರಕಟಿಸುವ ಆಲೋಚನೆಯಲ್ಲಿ ಇದ್ದೇವೆ. ಆದ್ದರಿಂದ ಭಕ್ತಾದಿಗಳು, ಅಭಿಮಾನಿಗಳು, ಹಿತೈಷಿಗಳು, ಸಾರ್ವಜನಿಕರು ಅಸತ್ಯವಾದ ಸುದ್ದಿಗಳಿಗೆ, ಅಲ್ಲಸಲ್ಲದ ಅಪಪ್ರಚಾರಗಳಿಗೆ ಗಮನಕೊಡಬಾರದೆಂದು ಅಪೇಕ್ಷಿಸುತ್ತೇವೆ.

**ಶ್ರೀ ಶಿವಕುಮಾರ ಸ್ವಾಮಿಗಳು**
ಅಧ್ಯಕ್ಷರು
ಶ್ರೀ ಸಿದ್ಧಗಂಗಾಮಠ

## ಆರೋಗ್ಯ ರಹಸ್ಯ ೨

### ಗಾಳಿ

ಮಹಾತ್ಮ ಗಾಂಧಿ

ನೀರಿಲ್ಲದೆ ಕೆಲವು ದಿನ, ಆಹಾರವಿಲ್ಲದೆ ಇನ್ನೂ ಕೆಲವು ದಿನ, ಇರಬಹುದು. ಆದರೆ ಗಾಳಿಯಿಲ್ಲದೆ ಯಾರೂ ಬದುಕಲಾಗುವುದಿಲ್ಲ. ಆದ್ದರಿಂದಲೇ ನಮ್ಮ ಪ್ರಯತ್ನ ಲವಲೇಶವೂ ಇಲ್ಲದೆಯೆ ನಮಗೆ ಗಾಳಿ ಸಿಗುವಂತೆ ನಿಸರ್ಗ ನಮ್ಮ ಸುತ್ತ ಎತ್ತ-ತ್ತಲೂ ಗಾಳಿಯನ್ನು ತುಂಬಿದೆ.

ಮೂಗಿನ ಮೂಲಕ ನಾವು ಶ್ವಾಸಕೋಶದೊಳಕ್ಕೆ ಗಾಳಿಯನ್ನು ತೆಗೆದು ಕೊಳ್ಳುತ್ತೇವೆ. ಶ್ವಾಸಕೋಶಗಳು ಒಂದು ಬಗೆಯ ತಿದಿಗಳಂತೆ ಕೆಲಸ ಮಾಡುತ್ತವೆ. ನಾವು ಒಳಗೆ ತೆಗೆದುಕೊಳ್ಳುವ ವಾಯುಮಂಡಲದ ಗಾಳಿಯಲ್ಲಿ ಆಮ್ಲಜನಕ ಎಂಬ ಒಂದು ಜೀವದಾಯಕ ವಸ್ತುವಿದೆ. ನಾವು ಹೊರಗೆ ಬಿಡುವ ಉಸಿರನಲ್ಲಿ ಅನೇಕ ವಿಷ ಅನಿಲಗಳಿವೆ. ಉಸಿರು ಹೊರಗೆ ಬಂದೊಡನೆಯೆ ಅವು ಹೊರಗಣ ಗಾಳಿ-ಯಲ್ಲಿ ಹರಡಿ ಬೆರೆತು ತಮ್ಮ ಶಕ್ತಿಯನ್ನು ಕಳೆದುಕೊಳ್ಳುತ್ತವೆ. ಹಾಗಿರದಿದ್ದರೆ ಆ ಅನಿಲಗಳು ನಮ್ಮನ್ನು ಕೊಂದುಬಿಡಬಹುದು. ಆದುದರಿಂದಲೇ ಸರಿಯಾದ ವಾಯುಸಂಚಾರ ಆವಶ್ಯಕ.

ಶ್ವಾಸಕೋಶದಲ್ಲಿ ಗಾಳಿ ರಕ್ತದೊಡನೆ ನಿಕಟವಾಗಿ ಬೆರೆತು ರಕ್ತವನ್ನು ಶುದ್ಧ ಗೊಳಿಸುತ್ತದೆ. ಅನೇಕರಿಗೆ ಉಸಿರಾಡುವ ಕಲೆಯೇ ತಿಳಿಯದು ಈ ನ್ಯೂನತೆ ಅವರ ರಕ್ತದ ಪೂರ್ಣ ಶುದ್ಧೀಕರಣಕ್ಕೆ ಅಡ್ಡಿಯಾಗುತ್ತದೆ. ಕೆಲವು ಜನ ಮೂಗಿನ ಬದಲು ಬಾಯಿಯ ಮೂಲಕ ಉಸಿರಾಡುತ್ತಾರೆ. ಇದು ದುರಭ್ಯಾಸ. ಒಳಗೆ ಹೋಗುವ ಗಾಳಿಯನ್ನು ಸೋಸಿ, ಬಿಸಿ ಮಾಡಲು ಅನುಕೂಲಿಸುವಂತೆ ಪ್ರಕೃತಿ ನಮ್ಮ ಮೂಗನ್ನು ರಚಿಸಿದೆ ಬಾಯಿಯ ಮೂಲಕ ಉಸಿರಾಡಿದರೆ ವಾಯುಮಂಡ ಲದ ಗಾಳಿ ಹೀಗೆ ಶೋಧಿಸಲ್ಪಡದೆ ಬಿಸಿಯಾಗದೆಯೆ ಶ್ವಾಸಕೋಶವನ್ನು ಸೇರುತ್ತದೆ. ಉಸಿರಾಡುವ ವ್ಯಾಯಾಮವನ್ನು ಮಾಡಬೇಕೆಂದಾಯಿತು. ಈ ವ್ಯಾಯಾಮಗಳು ಎಷ್ಟು ಉಪಯುಕ್ತವೋ ಕಲಿಯಲು ಅಷ್ಟೇ ಸುಲಭ. ವಿವಿಧ ಯೋಗಾಸನಗಳ ಬಗ್ಗೆ ನಾನು ಇಲ್ಲಿ ಚರ್ಚೆಮಾಡುವುದಿಲ್ಲ. ಅವು ಮುಖ್ಯವಲ್ಲ ಉಪಯುಕ್ತವಲ್ಲ ಎಂದು ನಾನು ಹೇಳುವುದಿಲ್ಲ. ಆದರೆ ಆಸನಾದಿ ವ್ಯಾಯಾಮಗಳ ಅಭ್ಯಾಸಕ್ಕಿಂತ ಒಂದು ನಿಯಮಬದ್ಧ ಕ್ರಮಜೀವನದ ಪ್ರಯೋಜನ ಎಂದು ಒತ್ತಿ ಹೇಳಲು ಬಯಸು ತ್ತೇನೆ. ಮೂಗಿನ ಮೂಲಕ ಉಸಿರಾಡಲಿಕ್ಕೂ, ನಿರಾತಂಕವಾಗಿ ಎದೆ ಹಿಗ್ಗಲಿಕ್ಕೂ ಅನುಕೂಲವಾದ ಯಾವ ಆಸನವಾದರೂ ಸರಿಯೆ, ನಮ್ಮ ಉದ್ದೇಶ್ಯಕ್ಕೆ ಸಾಕು.



ನಾವು ಗಟ್ಟಿಯಾಗಿ ಬಾಯಿ ಮುಚ್ಚಿಕೊಂಡಿದ್ದರೆ, ಮೂಗಿನಿಂದಲೇ ಉಸಿರಾಡ ಬೇಕಲ್ಲವೆ. ದಿನವೂ ಬೆಳಿಗ್ಗೆ ಬಾಯಿ ತೊಳೆಯುವಂತೆ ಮೂಗನ್ನೂ ಸಹ ಶುದ್ಧಿ ಮಾಡಬೇಕು. ಶುದ್ಧವಾದ ನೀರು, ತಣ್ಣನೆಯದೋ ಅಥವಾ ಉಗುರು ಬೆಚ್ಚನೆ ಯದೋ ಈ ಕೆಲಸಕ್ಕೆ ಅತ್ಯುತ್ತಮ ಸಾಧನ. ನೀರನ್ನು ಲೋಟದಲ್ಲಾಗಲಿ, ಅಂಗೈ ಯಲ್ಲಾಗಲಿ ತೆಗೆದುಕೊಂಡು ಮೂಗಿನ ಹೊಳ್ಳೆಗಳಿಂದ ಒಳಕ್ಕೆ ಎಳೆದುಕೊಳ್ಳಬೇಕು. ಒಂದು ಹೊಳ್ಳೆಯನ್ನು ಮುಚ್ಚಿ, ಇನ್ನೊಂದರಿಂದ ನೀರೆಳೆದುಕೊಂಡು ಅಮೇಲೆ ಅದನ್ನು ಮುಚ್ಚಿ ಮೊದಲು ಮುಚ್ಚಿದ್ದ ಹೊಳ್ಳೆಯ ಮೂಲಕ ನೀರನ್ನು ಹೊರಗೆ ಬಿಡಬೇಕು. ಸ್ವಲ್ಪವೂ ಬಾಧೆಯಾಗದಂತೆ ಈ ಕ್ರಿಯೆಯನ್ನು ಮೃದುವಾಗಿ ನಡೆಸ-ಬೇಕು. ಮೂಗಿನ ಹಿಂಭಾಗವನ್ನು ಶುದ್ಧಿಗೊಳಿಸಲು ಹೀಗೆ ಎಳೆದುಕೊಂಡ ನೀರನ್ನು ಬಾಯಿಯ ಮೂಲಕ ಬಿಡಬೇಕು. ನೀರನ್ನು ಕುಡಿಯಲೂಬಹುದು.

ನಾವು ಉಸಿರಾಡುವ ಗಾಳಿ ಸ್ವಚ್ಛವಾಗಿರಬೇಕು. ನಕ್ಷತ್ರಗಳ ಅಡಿ ಬಯಲಿ-ನಲ್ಲಿ ಮಲಗುವುದನ್ನ ಅಭ್ಯಾಸ ಮಾಡುವುದು ಉತ್ತಮ. ಶೀತವಾಗುವುದೆಂಬ ಹೆದರಿಕೆಯನ್ನು ಮನಸ್ಸಿನಿಂದ ದೂರಮಾಡಬೇಕು. ಯಥೇಚ್ಛವಾದ ಹೊದಿಕೆಗಳಿಂದ ಚಳಿಯನ್ನು ತಡೆಯಬಹುದು. ಕುತ್ತಿಗೆಯಿಂದ ಮೇಲೆ ಹೊದೆದುಕೊಳ್ಳಬಾರದು. ತಲೆಗೆ ಚಳಿಯಾದರೆ, ಬೇರೆ ಒಂದು ಬಟ್ಟೆಯನ್ನು ತಲೆಗೆ ಸುತ್ತಿಕೊಳ್ಳಬಹುದು, ಶ್ವಾಸ ದ್ವಾರವಾದ ಮೂಗನ್ನು ಎಂದಿಗೂ ಮುಚ್ಚಬಾರದು.

ಮಲಗುವ ಮುನ್ನ ಹಗಲು ಧರಿಸಿದ್ದ ಉಡುಪನ್ನ ಕಳಚಿ ಸಡಿಲವಾದ ಉಡುಪನ್ನು ಉಪಯೋಗಿಸಬೇಕು. ರಾತ್ರಿ ದುಪ್ಪಟ್ಟಿ ಹೊದ್ದು ಮಲಗಿದಾಗ ನಿಜವಾಗಿ ಯಾವ ಉಡುಪೂ ಅಗತ್ಯವಲ್ಲ. ಹಗಲೂ ಸಹ ಬಿಗಿಯಾದ ಉಡು-ಪನ್ನು ಉಡಬಾರದು. ನಮ್ಮ ಸುತ್ತಣ ವಾತವರಣದ ಗಾಳಿ ಯಾವಾಗಲೂ ಶುದ್ಧವಾಗಿರುವುದಿಲ್ಲ. ಎಲ್ಲ ದೇಶಗಳಲ್ಲಿಯೂ ಒಂದೇ ಬಗೆ ಇರುವುದಿಲ್ಲ. ಇಂಥ ದೇಶದಲ್ಲಿ ಇರಬೇಕು ಎಂದು ಆರಿಸಿಕೊಳ್ಳುವುದು ಸಾಮಾನ್ಯವಾಗಿ ನಮ್ಮ ಕೈಯ ಲ್ಲಿಲ್ಲ. ಆದರೆ ಒಳ್ಳೆಯ ಪ್ರದೇಶದಲ್ಲಿ, ಒಳ್ಳೆಯ ಮನೆಯನ್ನು ಆರಿಸಿಕೊಳ್ಳುವುದು ಸ್ವಲ್ಪಮಟ್ಟಿಗೆ ನಮ್ಮ ಕೈಲಿದೆ. ತಂಬಾ ನಿಬಿಡವಲ್ಲದ ಪ್ರದೇಶದಲ್ಲಿ, ಗಾಳಿ ಬೆಳಕು ಧಾರಳವಾಗಿರುವ ಮನೆಯಲ್ಲಿ, ವಾಸಿಸುವುದು ಸಾಧಾರಣ ನಿಯಮವಾಗಿರಬೇಕು.

---

### ವಿನಂತಿ

ವಿಳಾಸ ಬದಲಾಗಿರುವ ಸದಸ್ಯರುಗಳು ತಮ್ಮ ಚಂದಾನಂಬರು ಸಹಿತ ಹೊಸ ವಿಳಾಸಗಳನ್ನ ತಿಳಿಸಲು ಕೋರಿದೆ.

ವಾರ್ಷಿಕ ಚಂದಾ ಅವಧಿ ಮುಗಿದ ಸದಸ್ಯರು 1988 ನೇ ಸಾಲಿಗೆ ತಮ್ಮ ಸದಸ್ಯತ್ವವನ್ನ ಮುಂದುವರಿಸಿಕೊಳ್ಳಲು ನಮ್ಮ ವಿನಮ್ರ ವಿನಂತಿ.

# ಸಿದ್ಧಗಂಗಾ ಜಾತ್ರೆ ಮತ್ತು ವಸ್ತುಪ್ರದರ್ಶನ

ಜಾತ್ರೆ ಮತ್ತು ವಸ್ತುಪ್ರದರ್ಶನಗಳು ಏಕಕಾಲದಲ್ಲಿ ಗ್ರಾಮಾಂತರ ಪ್ರದೇಶದಲ್ಲಿ ನಡೆಯುವುದು ಅಪರೂಪ. ಶ್ರೀ ಸಿದ್ಧಗಂಗಾ ಮಠದ ಹೆಮ್ಮೆಯ ಕಾರ್ಯಕ್ಷೇತ್ರ ಇವು. ಲಕ್ಷೋಪ ಲಕ್ಷಜನತೆಗೆ ಮಾರ್ಗದರ್ಶನ ನೀಡುವ ಒಳ್ಳೆಯ ಮಾಧ್ಯಮ.

5.ಫೆಬ್ರವರಿ–1988 ರಂದು ಜಾತ್ರೆಯ ಅಂಗವಾಗಿ ವಸ್ತುಪ್ರದರ್ಶನ ಪ್ರಾರಂಭವಾಗುತ್ತದೆ. ಇದರ ಕಾರ್ಯನಿರ್ವಹಣೆ ಶ್ರೀ ಮಠದ ಹಳೆಯ ವಿದ್ಯಾರ್ಥಿಸಂಘ. ಪ್ರಾರಂಭದಲ್ಲಿ ಚಿಕ್ಕ ಪ್ರಮಾಣದಲ್ಲಿದ್ದು ಈಗ ರಾಜ್ಯ ಮಟ್ಟದ ಪ್ರಖ್ಯಾತ ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನವಾಗಿ ಸೇವೆ ಸಲ್ಲಿಸುತ್ತಿದೆ. ಇದರ ಯಶಸ್ಸು ಮತ್ತು ಕೀರ್ತಿ ನಿರಂತರವಾಗಿ ಶ್ರಮಿಸುತ್ತಿರುವ ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಡಾ॥ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರಿಗೆ ಸಲ್ಲುತ್ತದೆ.

**1988 ವಸ್ತುಪ್ರದರ್ಶನದ ಸಿದ್ಧತೆ:–**

ತುಮಕೂರು ಜಿಲ್ಲಾ ಪರಿಷತ್ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ 16-2-87 ಜಿಲ್ಲೆಯ ವಿವಿಧ ಇಲಾಖೆಗಳ ಅಧಿಕಾರಿಗಳ ಸಭೆಯನ್ನು ಕರೆಯಲಾಗಿತ್ತು. ಭಾಗವಹಿಸಿದ್ದ ಅಧಿಕಾರಿಗಳು ತಮ್ಮ ಇಲಾಖೆಗಳ ಮಳಿಗೆಗಳು ಭಾಗವಹಿಸಲು ಅನುಕೂಲವಾಗುವಂತೆ ಸರ್ಕಾರದೊಡನೆ ವ್ಯವಹರಿಸಿ ಮುಂಜೂರಾತಿ ಪಡೆದುಕೊಳ್ಳುವುದಾಗಿ ಆಶ್ವಾಸನೆ ನೀಡಿದರು ಈ ವರ್ಷ ಮಳೆ–ಬೆಳೆಗಳು ಉತ್ತಮವಾಗಿರುವುದರಿಂದ ಜಾತ್ರೆ ಹೆಚ್ಚಿನ ಸಂಖ್ಯೆಯಲ್ಲಿ ಜನರನ್ನು ಆಕರ್ಷಿಸುತ್ತದೆ. ಪ್ರಯುಕ್ತ ವಸ್ತುಪ್ರರ್ಶನ ವೈಭವಯುತವಾಗಿ ನಡೆಯುವಂತೆ ಎಲ್ಲಾ ಇಲಾಖೆಗಳ ಮುಖ್ಯಸ್ಥರು ಸಹಕಾರ ನೀಡಬೇಕು ಈ ಬಗ್ಗೆ ಜಿಲ್ಲಾ ಪರಿಷತ್ ಪೂರ್ಣ ಸಹಕಾರ ಮತ್ತು ಬೆಂಬಲ ಕೊಡುವುದಾಗಿ ಅಧ್ಯಕ್ಷರಾದ ಶ್ರೀ ಹೆಚ್. ನಿಂಗಯ್ಯನವರು ಹೇಳಿದರು.

ಇಲಾಖೆಯ ಮಳಿಗೆಗಳಿಗೆ ಬೇಕಾಗುವ ಸ್ಥಳವನ್ನು ರಿಯಾಯಿತಿದರದಲ್ಲಿ ವಸ್ತುಪ್ರದರ್ಶನ ಸಮಿತಿಯ ನಿಬಂಧನೆಗೆ ಒಳಪಟ್ಟಂತೆ ಕಾದಿರಿಸಲಾಗುತ್ತದೆ. ಕೆಲವು ಮಳಿಗೆಗಳು ವಸ್ತುಪ್ರದರ್ಶನ ಉದ್ಘಾಟನೆಯಾದ ನಂತರ ಭಾಗವಹಿಸುತ್ತವೆ. ಆ ವೇಳೆಗೆ ಜಾತ್ರೆಯಲ್ಲಿ ಜನಗಳ ಪ್ರಮಾಣ ಇಳಿಮುಖವಾಗಿರುತ್ತದೆ. ಎಲ್ಲರಿಗೂ ನೋಡುವ ಅವಕಾಶ ದೊರಕುವುದಿಲ್ಲ. ಆದರಿಂದ ಮಳಿಗೆಗಳನ್ನು ಪ್ರಾರಂಭೋತ್ಸವ ದಿನದಂದೇ ತೆರೆಯಲು ಅನುಕೂಲವಾಗುವಂತೆ ಇಲಾಖೆಯ ಮುಖ್ಯಸ್ಥರಿಂದ ಶೀಘ್ರವಾಗಿ ಅನುಮತಿ ಪಡೆದುಕೊಳ್ಳಬೇಕೆಂದು ಸಮಿತಿ ಕೋರಿತು.



ಮಳಿಗೆಗಳು ಪ್ರತಿವರ್ಷ ಒಂದೇ ನಮೂನೆಯಲ್ಲಿ ಸಜ್ಜುಗೊಳಿಸುವುದು ಕಂಡುಬರುತ್ತಿದೆ. ನೂತನ ವಿಧಾನ ಮತ್ತು ವಿನ್ಯಾಸಗಳಿಂದ ಪ್ರಗತಿಯ ಮುನ್ನೋಟವನ್ನು ಪ್ರದರ್ಶಿಸುವಂತೆ ಇಲಾಖೆಯ ಅಧಿಕಾರಿಗಳು ಆಸ್ಥೆವಹಿಸಬೇಕು.

ಲಾಭದೃಷ್ಟಿಯಿಂದ ಈ ವಸ್ತುಪ್ರದರ್ಶನ ನಡೆಸುತ್ತಿಲ್ಲ. ಗ್ರಾಮೀಣ ರೈತ ಬಾಂಧವರ ತಿಳಿವಳಿಕೆಗಾಗಿ ಶ್ರೀ ಶ್ರೀಗಳವರು ಲಕ್ಷಾಂತರ ರೂಗಳನ್ನು ಖರ್ಚು ಮಾಡುತ್ತಿದ್ದಾರೆ. ಇದರ ಸದುಪಯೋಗ ಪಡೆದುಕೊಂಡು ತಮ್ಮ ದೃಷ್ಟಿಕೋನವನ್ನು ಬದುಕಿನಲ್ಲಿ ನವೀಕರಿಸಿಕೊಳ್ಳಬೇಕೆಂಬುದೇ ಅವರ ಮಹದಾಕಾಂಕ್ಷೆ. ಪಟ್ಟಣ ಪ್ರದೇಶಗಳಲ್ಲಿ ವಸ್ತು ಪ್ರದರ್ಶನಗಳು ನಡೆಯುವುದು ಸಾಮಾನ್ಯ. ಇಲ್ಲಿಯ ಜನತೆ ಭೇಟಿ ನೀಡುವುದು ಮನರಂಜನೆಗಾಗಿ ಮಾತ್ರ, ಆದರೆ ಶ್ರೀ ಮಠದ ಜಾತ್ರೆಯಲ್ಲಿ ಲಕ್ಷಾಂತರ ಮಂದಿ ನಾಡಿನಾದ್ಯಂತ ಬಂದ ರೈತರು ಭೇಟಿಕೊಟ್ಟು ಬುದ್ಧಿಶಕ್ತಿಯನ್ನು ವಿಕಾಸಗೊಳಿಸಿಕೊಳ್ಳುತ್ತಾರೆ. ಈ ದೃಷ್ಟಿಯನ್ನು ಗಮನದಲ್ಲಿರಿಸಿಕೊಂಡು ಮಳಿಗೆಗಳು ಬೋಧಪ್ರದವಾಗಿರುವಂತೆ ಅಧಿಕಾರಿ ಬಂಧುಗಳು ಶ್ರಮಿಸಬೇಕೆಂದು ಸಮಿತಿ ವಿನಂತಿ ಮಾಡಿತು.

ಖಾಸಗಿ ಉದ್ದಿಮೆದಾರರಿಗೆ ತಮ್ಮ ಮಳಿಗೆಗಳನ್ನು ತೆರೆಯಲು ವಿಶೇಷ ರಿಯಾಯಿತಿಯನ್ನು ನೀಡಲಾಗಿದೆ. ಜಿಲ್ಲಾ ಪರಿಷತ್ ವ್ಯಾಪ್ತಿಗೆ ಸೇರಿರುವ ಎಲ್ಲಾ ಇಲಾಖೆಗಳು ಹಿಂದಿನವರ್ಷಗಳಂತೆಯೇ 1988 ವಸ್ತುಪ್ರದರ್ಶನದಲ್ಲಿ ಕಡ್ಡಾಯವಾಗಿ ಪಾಲ್ಗೊಳ್ಳಬೇಕೆಂದು ಮನವಿಮಾಡಲಾಯಿತು.

ಶ್ರೀ ಹೆಚ್. ನಿಂಗಯ್ಯನವರು ಹಿಂದಿನವರ್ಷಗಳಲ್ಲಿ ಸರಕಾರ ಯಾವರೀತಿ ಸಹಾಯ ಸಹಕಾರಗಳನ್ನು ನೀಡುತ್ತಿತ್ತೊ ಅಂತೆಯೇ ವಸ್ತುಪ್ರದರ್ಶನದ ಯಶಸ್ಸಿಗೆ ಎಲ್ಲಾ ಸೌಲಭ್ಯಗಳನ್ನು ಪರಿಷತ್ ಮುಂದು ವರಿಸುವುದಾಗಿ ಆಶ್ವಾಸನೆ ನೀಡಿದರು. ಮಳಿಗೆಗಳನ್ನು ಕಾಯ್ದಿರಿಸಲು ಈ ವಿಳಾಸದೊಡನೆ ವ್ಯವಹರಿಸಿ.

**ಕಾರ್ಯದರ್ಶಿಗಳು,**

**ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ**

ಶ್ರೀ ಸಿದ್ಧಗಂಗಾ ಮಠ ತುಮಕೂರು ಜಿಲ್ಲೆ–572104

ಅನುಭವಾಮೃತ (ಸ್ವಾನುಭಾವಗೀತೆ)

ಶ್ರೀ ಮೋಟಗಿ ಮಲ್ಲಿಕಾರ್ಜುನ 'ಕನ್ನಡ ಕವಿಕಾಳಿದಾಸ' ಅಥಣಿ, ಬೆಳಗಾವಿ ಜಿಲ್ಲೆ

ಸ. ವೃತ್ತ ॥ ಕುರುಹುದೋರಿದ ಗುರುವೆ ನಿನ್ನ ನಾನೆಂತು ಮರೆಯಲಯ್ಯ
ಅರುಹಿನನು ಭಾವವನೆ ಕರುಣಿಸಿದ ತಂದೆ ಶರಣು ಲಿಂಗಯ್ಯ
ಅರಳುತಿಹ ಬಾಳಿನೊಳನವರತನೀಸುಖ-ದುಃಖವಿರಿಸಿದಯ್ಯ
ಮರೆಯಬಾರದೆಂದು ಮಮ ಹೃದಯ ಕರೆಯುತಿರಲಾಗಮಿಸಿದಯ್ಯ ॥ 1 ॥

ಸಂಸಾರ ಕಾಸಾರದೊಳಿರ್ದೊಡು ಜಲದೊಳಿಹ ಕಮಲದಂತೆ
ಹಂಸ ಕ್ಷೀರ ನ್ಯಾಯದವೊಲಾ ಸುಧಾರಸಮಂ ಸೇವಿಸುತೆ
ಸಂಸ್ಕೃತಿ ಪರಮಾರ್ಥವ ತಿಳಿದು ಸಾಧಿಸಲ್ ಘನ ಮುಕ್ತಿ
ಸಂಸಿದ್ಧ ಮೆನಲದನೆ ಕರುಣಿಸಿದೆನಗೆ ಗುರುವೆ ಶರಣಾರ್ಥಿ ॥ 2 ॥

ಹಗಲಿರುಳು ಹೃದಯ ಹಾರೈಸುತಿರೆ ಶಿವಧರ್ಮವೃದ್ಧಿಗಾಗಿ
ಬಗೆಬಗೆಯ ಜನ ಕಲೆತು ಲಿಂಗತತ್ವವನರಿದು ನಡೆಯಲಾಗಿ
ಅಘಹರನ ದಯದಿ "ದೇವರಾಜ್ಯ ಸಂಪದ" ಧರೆಗಿಳಿದು ಬರಲಾಗಿ
ಸೊಗವೆನಿತೊ ಜಗಕೆ ಹೇಳಬಲ್ಲವರಾರು ಶಿವಲೀಲೆಯಾಗಿ ॥ 3 ॥

ಬಸವಣ್ಣ ಮಮಭಾಗ್ಯ ಅಲ್ಲಮ ಪ್ರಭುದೇವ ಸೌಭಾಗ್ಯ
ಶಶಿವದನೆ ನೀಲಮ್ಮ ಮುಕ್ತಾಯಿ ಮಹಾದೇವಿ ಮಾತೃಭಾಗ್ಯ
ಜಸವಡೆದ ಚನ್ನಬಸವಣ್ಣ ಸಿದ್ಧರಾಮ ಮಡಿವಳಯ್ಯ
ಅಸಮ ಶರಣ ಸಂಕುಳವೆನಗೆ ಕೈವಲ್ಯ ಸುಖ ಸೌಭಾಗ್ಯ ॥ 4 ॥

ಶಿವಶರಣರಾ ಹರಕೆಯಂ ಶಿರದೊಳಾಂತು ನಾಮನದುಂಬಿ
ತವೆ ಶರಣ ಗುಣಗಾನಗೆಯ್ಯುವೆನು ಹರ್ಷದಲಿ ಹೃದಯದುಂಬಿ
ಶಿವಲಿಂಗ ಭೋಗೋಪ ಭೋಗಿಯಾಗಿ ಸದ್ಧರ್ಮ ಭಕ್ತಿ ತುಂಬಿ
ಭವಗೆಲಿದು ಕುಡಿದಿರುವೆ ಪರಮಾಮೃತ ದಿವ್ಯ ಶಕ್ತಿತುಂಬಿ ॥ 5 ॥

ನಾನುನೀನೆಂಬುಭಯ ತಾನಳಿಯೆ ತಾನೆತಾನಾಗಿ ನಲಿಯೆ
ನೀನುನಾನೆಂಬುದಿನ್ನೆಲ್ಲಿ ಲಿಂಗದೇವನೆ ನಾನರಿಯೆ
ಸಾನುರಾಗದಲಿ ನಿತ್ಯ ಭಜಿಪ ಭಕ್ತಂಗೊಲಿಯೆ ಪರಂಜ್ಯೋತಿಯೆ
ತಾನೆತಾನಾಗಿ ಬೆಳಗಿ "ಕನ್ನಡ ಕವಿ ಕಾಳಿದಾಸ"ನ್ ಬರೆದಂವ್ ॥ 6 ॥

# ಕೃಷಿ ಅಭಿವೃದ್ಧಿಯಲ್ಲಿ ಗ್ರಾಮೀಣ ಬ್ಯಾಂಕುಗಳ ಪಾತ್ರ


**ಡಿ. ವೆಂಕಟರಾವ್,** ಎಂ. ಎ. ಪ್ರಾಚಾರ್ಯರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಕಲೇಶಪುರ, ಹಾಸನ ಜಿಲ್ಲೆ.


ನಮ್ಮ ದೇಶದಲ್ಲಿ ಸ್ವಾತಂತ್ರ್ಯ ನಂತರ ರೈತರ ಉದ್ಧಾರಕ್ಕಾಗಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಲಾಯಿತು. ಇದರ ಫಲವಾಗಿ ದೇಶದ ಅನೇಕ ಭಾಗಗಳಲ್ಲಿ ನೀರಾವರಿ ಸೌಲಭ್ಯಕ್ಕಾಗಿ ದೊಡ್ಡ ದೊಡ್ಡ ಜಲಾಶಯಗಳು ನಿರ್ಮಾಣಗೊಂಡವು. ರಾಸಾಯನಿಕ ಗೊಬ್ಬರ ತಯಾರಿಕೆಯ ಕಾರ್ಖಾನೆಗಳು ಸ್ಥಾಪಿತವಾದವು. ಆದರೆ ಕನಿಷ್ಟ ಮತ್ತು ಬಹು ಸಂಖ್ಯಾತರಾದ ಸಣ್ಣ ರೈತರ ಆವಶ್ಯಕತೆಗಳನ್ನು ಪೂರೈಸುವುದಕ್ಕೆ ಬದಲಾಗಿ ಇವು ಶ್ರೀಮಂತರ ಪಾಲಿಗೆ ಹೋದವು ಎನ್ನುವುದು ವಿಷಾದದ ಸಂಗತಿ. ಉಳಲು, ಬಿತ್ತಲು, ಶಕ್ತಿ ಇಲ್ಲದ ಮತ್ತು ಭೂಮಿಯನ್ನು ಯಾರದೋ ಒಡತನದಲ್ಲಿ ಬಿಟ್ಟಿದ್ದ ಬಡರೈತ ಇಂತ ಸೌಕರ್ಯಗಳ ಉಪಯೋಗವನ್ನು ಮಾಡಿಕೊಳ್ಳುವುದು ಸಾಧ್ಯವೂ ಇರಲಿಲ್ಲ. ಆಗ ಅವನಿಗೆ ಅತಿ ಅಗತ್ಯವಾಗಿದುದ್ದು ಹಣ. ಆದರೆ ರೈತನ ಹಣಕಾಸಿನ ಸೌಲಭ್ಯದ ವಿಷಯದಲ್ಲಿ ಸರಕಾರ ಅನೇಕ ವರ್ಷಗಳವರೆಗೆ ಪ್ರೋತ್ಸಾಹ ನೀಡಲಿಲ್ಲವೆಂದೇ ಹೇಳಬೇಕು. ವ್ಯಾಪಾರ ಮತ್ತು ಉದ್ದಿಮೆಗಳ ಅಭಿವೃದ್ಧಿಗೆಂದು ದೇಶದ ನಾನಾ ಭಾಗಗಳಲ್ಲಿ ಬ್ಯಾಂಕುಗಳು ಹುಟ್ಟಿಕೊಂಡುವಾದರೂ ರೈತರ ನೆರವಿಗಾಗಿ ಸಹಕಾರಿ ಸಂಘಗಳನ್ನು ಬಿಟ್ಟರೆ ಈಗಿನಂತೆ ಸಹಕಾರಿ ಸ್ವಾಮ್ಯದ ಹಣಕಾಸಿನ ಸಂಸ್ಥೆಗಳೇ ಇರಲಿಲ್ಲ. ಸಹಕಾರಿ ಸಂಘಗಳು ರೈತರ ನೆರವಿಗಾಗಿ ಪ್ರಯತ್ನ ಕೈಗೊಂಡುವದರೂ ಅವುಗಳಿಂದ ಹೆಚ್ಚಿನ ಪ್ರಯೋಜನವೇನೂ ಆಗಲಿಲ್ಲ. ಹಲವಾರು ರೈತರು ಅಲ್ಪ ಸ್ವಲ್ಪ ಹೊಲ ಮತ್ತು ಮನೆಗಳನ್ನು ಈ ಸಂಘಗಳಿಂದ ಕಳೆದುಕೊಳ್ಳುವಂತಾಯಿತು. ರೈತರ ಈ ಸಮಸ್ಯೆಯನ್ನು ಮನಗಂಡ ಸರಕಾರ 20 ಬ್ಯಾಂಕುಗಳನ್ನು ರಾಷ್ಟ್ರೀಕರಣ ಮಾಡಿತು. ಆದರೆ ಈ ಬ್ಯಾಂಕುಗಳು ಹೆಚ್ಚಾಗಿ ನಗರ ಮತ್ತು ತಾಲ್ಲೂಕು ಮಟ್ಟಗಳಿಗೆ ಸೀಮಿತವಾಗಿದ್ದುದರಿಂದ ಗ್ರಾಮಗಳಲ್ಲಿ ವಾಸಿಸುವ ಬಡರೈತರು ಮೇಲಿಂದ ಮೇಲೆ ಈ ಬ್ಯಾಂಕುಗಳ ಬಾಗಿಲಿಗೆ ಬರುವುದಕ್ಕೆ ಪ್ರಯಾಸವಾಯಿತು. ರೈತರ ಈ ಸಮಸ್ಯೆಯನ್ನು ಗಮನಿಸಿದ ಸರಕಾರದ 1976ರಲ್ಲಿ 20 ಅಂಶಗಳ ಕಾರ್ಯಕ್ರಮದ ಅಡಿಯಲ್ಲಿ ಗ್ರಾಮೀಣ ಬ್ಯಾಂಕುಗಳನ್ನು ರಾಷ್ಟ್ರೀಕೃತ ಬ್ಯಾಂಕುಗಳ ಮೂಲಕ ಸ್ಥಾಪಿಸಿತು. ಗ್ರಾಮಪ್ರದೇಶಗಳ ಜನರಿಗೆ ಸೂಕ್ತ ಧನ ಪೋಷಣೆಯ ವ್ಯವಸ್ಥೆಯನ್ನು ಒದಗಿಸುವುದು ಇದರ ಗುರಿಯಾಗಿತ್ತು. ಇಂದು ಕೇವಲ ಒಂದೆರಡು ಜಿಲ್ಲೆಗಳಷ್ಟು ಭೌಗೋಳಿಕ ಪ್ರದೇಶಕ್ಕೆ ಬ್ಯಾಂಕ್ ವ್ಯವಹಾರಗಳು ಸೀಮಿತಗೊಂಡಂತೆ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ದೇಶದ ವಿವಿಧ ಭಾಗಗಳಲ್ಲಿ ತೆರೆಯಲಾಗಿದೆ. 1977ರ ವೇಳೆಗೆ

ಭಾರತದಲ್ಲಿ 48 ಗ್ರಾಮೀಣ ಬ್ಯಾಂಕುಗಳು ಕೆಲಸ ಮಾಡುತ್ತಿದ್ದು. ಇವು 767
ಶಾಖೆಗಳನ್ನು ಹೊಂದಿದ್ದವು. ಒಟ್ಟು 16 ರಾಜ್ಯಗಳಲ್ಲಿ 86 ಜಿಲ್ಲೆಗಳು ಇವಕ್ಕೆ
ಒಳಪಟ್ಟಿದ್ದವು. 1984 ರ ವೇಳೆಗೆ 173 ಗ್ರಾಮೀಣ ಬ್ಯಾಂಕುಗಳು 10245
ಶಾಖೆಗಳನ್ನು ಹೊಂದಿದ್ದವು. ಈ ಬ್ಯಾಂಕುಗಳಲ್ಲಿ 960 ಕೋಟಿ ರೂಗಳಷ್ಟು
ಠೇವಣಿ ಇತ್ತು. 1985 ರ ವೇಳೆಗೆ ದೇಶದ 322 ಜಿಲ್ಲೆಗಳಲ್ಲಿ 183 ಗ್ರಾಮೀಣ
ಬ್ಯಾಂಕುಗಳು ಸ್ಥಾಪನೆಯಾಗಿದ್ದವು. ಗ್ರಾಮಾಂತರ ಪ್ರದೇಶಗಳಲ್ಲಿ ಸಾಲಗಳು
ಮತ್ತಿತ್ತರ ಸೌಲಭ್ಯಗಳನ್ನು ಒದಗಿಸುವಲ್ಲಿ ಗ್ರಾಮೀಣ ಬ್ಯಾಂಕುಗಳು ಪ್ರಶಂಸಾರ್ಹ
ಸೇವೆ ಸಲ್ಲಿಸುತ್ತಿವೆ. ಇವು ಶಾಖೆಗಳ ಜಾಲವನ್ನೇ ತೆರೆದಿವೆ.

ಕರ್ನಾಟಕ ರಾಜ್ಯದಲ್ಲಿ ಗ್ರಾಮೀಣ ಬ್ಯಾಂಕುಗಳು ನೂರಾರು ಶಾಖೆ-
ಗಳೊಂದಿಗೆ ಗ್ರಾಮೀಣ ಅಭಿವೃದ್ಧಿಗಾಗಿ ಹೋರಾಟ ನಡೆಸಿವೆ. ಉತ್ತರ ಕರ್ನಾಟಕ-
ದಲ್ಲಿ ಕೃಷ್ಣಾ, ಮಲ್ಲಪ್ರಭಾ ಮತ್ತು ತುಂಗಭದ್ರಾ ಬ್ಯಾಂಕುಗಳಾದರೆ ದಕ್ಷಿಣ
ಕರ್ನಾಟಕದಲ್ಲಿ ಚಿತ್ರದುರ್ಗ ಹಾಗೂ ಕಾವೇರಿ ಪ್ರಮುಖ ಬ್ಯಾಂಕುಗಳಾಗಿವೆ.
ಈ ಗ್ರಾಮೀಣ ಬ್ಯಾಂಕುಗಳ ಪೈಕಿ ಧಾರವಾಡ ಹಾಗೂ ಬೆಳಗಾವಿ ಜಿಲ್ಲೆಗಳಲ್ಲಿ
ರೂಪುಗೊಂಡ ಮಲಪ್ರಭಾ ಗ್ರಾಮೀಣ ಬ್ಯಾಂಕು ಪ್ರಥಮಸ್ಥಾನವನ್ನು ಅಲಂಕರಿ-
ಸಿದೆ. 1981 ರಲ್ಲಿ ಈ ಬ್ಯಾಂಕು ಒಟ್ಟು 115 ಶಾಖೆಗಳನ್ನು ಹೊಂದಿತ್ತು.
1981 - 82 ನೇ ಸಾಲಿನಲ್ಲಿ ಈ ಬ್ಯಾಂಕು 1 ಲಕ್ಷ 66 ಸಾವಿರ ಜನರಿಗೆ ಹಣ-
ಕಾಸಿನ ನೆರವನ್ನು ಒದಗಿಸಿತ್ತು. ಇದಕ್ಕಾಗಿ 19 . 28 ಕೋಟಿ ರೂ ಹಣವನ್ನು
ವಿನಿಯೋಗಿಸಿತು.

**ಉದ್ದೇಶ:–** ಗ್ರಾಮೀಣ ಬ್ಯಾಂಕುಗಳು ಗ್ರಾಮಾಂತರ ಪ್ರದೇಶಗಳಲ್ಲಿರುವ ಸಣ್ಣ
ಹಾಗೂ ಸಣ್ಣಪ್ರಮಾಣದ ಅಂಚಿನಲ್ಲಿರುವ ರೈತರಿಗೆ, ಕೃಷಿ ಕಾರ್ಮಿಕರಿಗೆ, ಕಸುಬು-
ದಾರರಿಗೆ ಮತ್ತು ಸಣ್ಣ ಉದ್ಯಮ ಶೀಲರಿಗೆ ಸಾಲಗಳು ಮತ್ತಿತರ ಸೌಲಭ್ಯಗಳನ್ನು
ಒದಗಿಸಿಕೊಡುತ್ತವೆ. ಪ್ರತಿಯೊಂದು ಪ್ರಾದೇಶಿಕ ಗ್ರಾಮೀಣ ಬ್ಯಾಂಕನ್ನು ಒಂದು
ಸರಕಾರಿ ಕ್ಷೇತ್ರದ ಬ್ಯಾಂಕು ಪ್ರಾರಂಭಿಸುತ್ತದೆ. ಗ್ರಾಮೀಣ ಬ್ಯಾಂಕುಗಳ
ಮೂಲ ಉದ್ದೇಶವೆಂದರೆ ಶತಮಾನಗಳಿಂದ ಅಲಕ್ಷಿಸ್ಪಟ್ಟಿದ್ದ ಸಣ್ಣ ರೈತ, ಅತಿಸಣ್ಣ
ರೈತ ಮತ್ತು ಕೃಷಿ ಕಾರ್ಮಿಕರನ್ನು ಗುರುತಿಸಿ ಅವರನ್ನು ಆರ್ಥಿಕ ಮುಗ್ಗಟ್ಟಿನಿಂದ
ಪಾರುಮಾಡುವುದು. ಎರಡನೆಯದಾಗಿ, ಕುಶಲ ಕೈಗಾರಿಕೆಗಳಲ್ಲಿ ತೊಡಗಿದ
ನೇಕಾರರು, ಬಡಗಿಗಳು, ಕಮ್ಮಾರ ಮತ್ತು ಕುಂಬಾರರನ್ನು ಗುರುತಿಸಿ, ಹಣದನೆರ-
ವನ್ನು ನೀಡುವ ಮೂಲಕ ನಶಿಸಿ ಹೋಗಲಿರುವ ಕೈಗಾರಿಕೆಗಳನ್ನು ಅವರಿಂದ ಪುನ-
ರುಜ್ಜೀವನ ಗೊಳಿಸುವುದಲ್ಲದೆ ನಿರುದ್ಯೋಗ ಬವಣೆಯನ್ನು ಕಡಿಮೆ ಮಾಡುವುದು.
ಒಟ್ಟಿನಲ್ಲಿ ಗ್ರಾಮೀಣ ಬ್ಯಾಂಕುಗಳ ಧ್ಯೇಯವೆಂದರೆ ಮಧ್ಯಮ ಮತ್ತು ಸಣ್ಣರೈತರ
ಹಾಗೂ ಇನ್ನುಳಿದ ಜನರ ಅಭಿವೃದ್ಧಿ ಹಾಗೂ ಕೃಷಿ ಪ್ರಗತಿ.



**ಬಂಡವಾಳದ ಮೂಲ:–** ಗ್ರಾಮೀಣ ಬ್ಯಾಂಕುಗಳ ಬಂಡವಾಳದ ಮೂಲ-
ಗಳೆಂದರೆ ಕೇಂದ್ರ ಸರಕಾರ, ಅದರ ಪೋಷಣೆ ಹೊತ್ತಕೊಂಡ ಪ್ರವರ್ತಕ
ಬ್ಯಾಂಕುಗಳು ಮತ್ತು ಆಯಾರಾಜ್ಯ ಸರಕಾರಗಳು.

**ಸಿಬ್ಬಂದಿ:–** ಗ್ರಾಮೀಣ ಬ್ಯಾಂಕುಗಳ ಆಡಳಿತದಲ್ಲಿ ಕಂಡುಬರುವ ಅತಿ ಮುಖ್ಯ
ಅಂಶವೆಂದರೆ ಅದರ ಅತಿಕಡಿಮೆ ನಿರ್ವಹಣಾ ವೆಚ್ಚ, ಪ್ರತಿಯೊಂದು ಶಾಖೆಯು
ತನ್ನದೇ ಆದ ಸಣ್ಣ ಕಾರ್ಯಾಲಯವನ್ನು ಹೊಂದಿದ್ದು 4 ರಿಂದ 6 ಜನ ಸಿಬ್ಬಂದಿ
ಯನ್ನು ಹೊಂದಿರುತ್ತದೆ. ಇವರ ವೇತನ ಶ್ರೇಣಿಯು ಆಯಾ ರಾಜ್ಯ ಸರಕಾರ
ಗಳ ನೌಕರರ ವೇತನ ಶ್ರೇಣಿಗೆ ಅನುಗುಣವಾಗಿರುತ್ತದೆ. ಈ ಬ್ಯಾಂಕುಗಳ
ಮತ್ತೊಂದು ವೈಶಿಷ್ಟ್ಯವೆಂದರೆ ಆಯಾ ಪ್ರದೇಶದ ನಿವಾಸಿಗಳಿಂದಲೇ ಅರ್ಜಿಗಳನ್ನು
ಕರೆದು ಆಯ್ಕೆ ಮಾಡಿ ಅವರಿಗೆ ಬ್ಯಾಂಕಿನ ವ್ಯವಹಾರಗಳನ್ನು ಕುರಿತು ತರಬೇತಿ
ನೀಡುವುದು. ಈ ತರಬೇತಿಯಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಸೇವೆ ಮಾಡಲು ಅನು
ಕೂಲವಾಗುವಂತೆ ಅವರನ್ನು ಸಿದ್ಧಗೊಳಿಸಲಾಗುತ್ತದೆ. ಇದರಿಂದಾಗಿ ಜನ ಸಾಮಾ-
ನ್ಯರು ಎದುರಿಸುವ ಅನಾನುಕೂಲತೆಗಳು ಮತು ಅವುಗಳಿಗೆ ಪರಿಹಾರೋಪಾಯ
ಗಳನ್ನು ಕಂಡುಹಿಡಿಯುವುದು ಸುಲಭವಾಗುತ್ತದೆ. ಗ್ರಾಮೀಣ ಬ್ಯಾಂಕುಗಳ
ಉದ್ದೇಶಗಳನ್ನು ಸಫಲಗೊಳಿಸುವಲ್ಲಿ ಅವುಗಳ ಸಿಬ್ಬಂದಿಯ ಹೊಣೆ ಬಹಳ ದೊಡ್ಡದು.
ಬ್ಯಾಂಕಿನಿಂದ ರೈತ ಹಣ ಪಡೆದರೆ ಸಾಲದು ಆ ಹಣ ಸದ್ವಿನಿಯೋಗವಾಗುತ್ತಿದೆಯೇ
ಎಂಬುದು ಮುಖ್ಯ. ಆದ್ದರಿಂದ ಬ್ಯಾಂಕಿನ ಕ್ಷೇತ್ರಾಧಿಕಾರಿಯು ಎಲ್ಲಾ ಕಡೆಗೂ
ಭೇಟಿ ಕೊಟ್ಟು ಆ ಬಗ್ಗೆ ಪರಿಶೀಲಿಸುತ್ತಾನೆ. ಜೊತೆಗೆ ಸಮಯಕ್ಕೆ ಸರಿಯಾಗಿ
ಸಾಲದ ಮರು ಪಾವತಿಯಾಗುವಂತೆ ದಕ್ಷತೆಯಿಂದ ಕಾರ್ಯನಿರ್ವಹಿಸುತ್ತಾನೆ.
ಬ್ಯಾಂಕಿನ ಸಿಬ್ಬಂದಿಯ ಪ್ರತಿಯೊಬ್ಬನೂ ಗ್ರಾಮದ ನಿವಾಸಿಗಳಿಗೆ ಬ್ಯಾಂಕಿನ
ಕಾರ್ಯ ಕಲಾಪ ಮತ್ತು ಆರ್ಥಿಕ ನೆರವಿನಿನ ಬಗ್ಗೆ ತಿಳಿ ಹೇಳುತ್ತಾನೆ. ಕೃಷಿ
ಉತ್ಪನ್ನಗಳನ್ನು ಉತ್ಪಾದಿಸುವ ಹಂತದಿಂದ ಹಿಡಿದು ಅವುಗಳನ್ನು ಮಾರಾಟ
ಮಾಡುವವರೆಗೂ ಅವಶ್ಯವೆನಿಸಿದಲ್ಲಿ ಈ ಸಿಬ್ಬಂದಿ ಸಲಹೆ, ಸೂಚನೆ ನೀಡುತ್ತದೆ.
ಗ್ರಾಮೀಣ ಬ್ಯಾಂಕು ಕೇವಲ ಹಣ ನೀಡಿದರೆ ತನ್ನ ಜವಾಬ್ದಾರಿ ಮುಗಿಯಿತೆಂದು
ತಿಳಿಯದೆ ತನ್ನ ಸಿಬ್ಬಂದಿಯನ್ನು ರೈತರ ಹೊಲಕ್ಕೂ ಕಳಿಸಿ ಅವರ ಹಿತ ಚಿಂತನೆ
ಮಾಡುತ್ತಿರುವುದು ಬಹಳಷ್ಟು ಗಮನಾರ್ಹ ವಿಷಯವೇ ಸರಿ. ಈ ಬ್ಯಾಂಕು ಹಣವಿಲ್ಲ-
ದವರಿ ಸಾಲಕೊಡುವುದರ ಜೊತೆಗೆ ಹಣವಂತರಿಂದ ಹಣವನ್ನು ಠೇವಣಿಯಾಗಿ ಸ್ವೀಕ
ರಿಸಿ ಆ ಮೂಲಕ ದೇಶದ ಇನ್ನುಳಿದ ಉದ್ಯಮಕ್ಕೂ ಆ ಹಣದ ಉಪಯೋಗವಾಗುವಂತೆ
ನೋಡಿಕೊಳ್ಳುತ್ತದೆ. ಗ್ರಾಮೀಣ ಪ್ರದೇಶದಲ್ಲಿದ್ದು ಸೇವೆಮಾಡುವ ಮೂಲಕ ತಮ್ಮ
ವೈಯಕ್ತಿಕ ಅಸ್ತಿತ್ವಕ್ಕಾಗಿ ಹಣಗಳಿಸುವುದೆಂದರೆ ಅಷ್ಟು ಸುಲಭವಲ್ಲವಾದರೂ
ಗ್ರಾಮೀಣ ಬ್ಯಾಂಕುಗಳು ಈ ದಿಸೆಯಲ್ಲಿ ನೂತನ ಅಧ್ಯಾಯವನ್ನೇ ಪ್ರಾರಂಭಿಸಿವೆ.

ಕೆಲವು ಪ್ರದೇಶಗಳಲ್ಲಿ ಗ್ರಾಮೀಣ ಬ್ಯಾಂಕುಗಳು ರೈತರ ಸೇವಾ ಸಂಸ್ಥೆಗಳನ್ನು ಕಾರ್ಯ
ರೂಪಕ್ಕೆ ತಂದು ಹೆಚ್ಚಿನ ಸೇವೆ ಸಲ್ಲಿಸುತ್ತಿವೆ. ರೈತರ ಬೇಡಿಕೆಗಳ ಪೂರೈಕೆಗಾಗಿ
ಶ್ರಮಿಸುವುದರ ಜೊತೆಗೆ ಈ ಸಂಸ್ಥೆಗಳು ಅವರ ಉತ್ಪನ್ನಗಳಿಗೆ ಯೋಗ್ಯಬೆಲೆ ದೊರಕಿಸಿ
ಕೊಡಲು ಪ್ರಯತ್ನಿಸುತ್ತಿವೆ. ರೈತರು ಬೆಳೆದ ಧಾನ್ಯಗಳನ್ನು ಸಂಗ್ರಹಿಸಿಡಲು ಉಗ್ರಾಣ
ವ್ಯವಸ್ಥೆಯನ್ನು ಈ ಸಂಸ್ಥೆಗಳು ಮಾಡುತ್ತಿವೆ. ಹೀಗೆ ಧಾನ್ಯಗಳನ್ನು ಸಂಗ್ರಹ
ಮಾಡುವುದರಿಂದ ರೈತರ ಬೆಳೆಗೆ ಯೋಗ್ಯ ಬೆಲೆ ದೊರೆಯುವುದಲ್ಲದೆ ಬೆಲೆಯನ್ನು
ನಿಯಂತ್ರಣದಲ್ಲಿಡಬಹುದು. ಮುಖ್ಯವಾಗಿ ಈ ಬ್ಯಾಂಕುಗಳು ಬಡ್ಡಿ ವ್ಯಾಪಾರಿಗಳ
ವ್ಯವಹಾರವನ್ನು ಕೆಡಿಸಿವೆ ಈ ಬ್ಯಾಂಕುಗಳಿಗೆ ಸ್ಥಳೀಯ ಅಗತ್ಯಗಳ ಅರಿವಿರುತ್ತದೆ
ಗ್ರಾಮಾಂತರ ಸಮಸ್ಯೆಗಳ ಪರಿಚಯವಿರುತ್ತದೆ.

ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ತಮ್ಮ ಉದ್ದೇಶ ಪೂರೈಸಬಲ್ಲುವೆ ಎಂಬ
ವಿಚಾರವಾಗಿ ಅನೇಕರು ಸಂದೇಹ ವ್ಯಕ್ತಪಡಿಸಿದ್ದುಂಟು. ಸರಕಾರದ ಬ್ಯಾಂಕಿಂಗ್
ಇಲಾಖೆಗೂ ಈ ಬಗ್ಗೆ ನಂಬಿಕೆ ಇರಲಿಲ್ಲ. ಸರಕಾರಿ ಕ್ಷೇತ್ರಕ್ಕೆ ಸೇರಿರುವ ಬೃಹತ್
ವಾಣಿಜ್ಯಬ್ಯಾಂಕುಗಳೇ ಗ್ರಾಮಪ್ರದೇಶದಲ್ಲಿ ಧನಪೋಷಣೆಯ ಕಾರ್ಯದಲ್ಲಿ ನಿರತ-
ವಾಗಿರುವುದರಿಂದ ಇವುಗಳ ಅಗತ್ಯವಿಲ್ಲವೆನ್ನುವುದು ಕೆಲವರವಾದವಾಗಿತ್ತು.
ಆದ್ದರಿಂದ ರಿಸರ್ವ್‌ಬ್ಯಾಂಕು ಈ ಬ್ಯಾಂಕುಗಳ ಕಾರ್ಯವನ್ನು ಪರಿಶೀಲಿಸಿ ವರದಿ
ಸಲ್ಲಿಸಲು ಪ್ರೊ. ಎಂ. ಎಲ್. ದಂತ್‌ವಾಲಾ ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು
ನೇಮಿಸಿತ್ತು. ಈ ಸಮಿತಿಯು ಗ್ರಾಮೀಣ ಪ್ರದೇಶಗಳ ಅತ್ಯಗತ್ಯವನ್ನು ಒತ್ತಿ
ಹೇಳಿ ಇನ್ನೂ ಗ್ರಾಮೀಣ ಧನಪೋಷಣಾ ವ್ಯವಸ್ಥೆಯ ಶಾಶ್ವತಅಂಗಗಳಾಗಿ
ಬಲಪಡಿಸಿ ಬೆಳೆಸಬೇಕು. ಎಂದು ಶಿಫಾರ್ಸು ಮಾಡಿತು. ವಾಣಿಜ್ಯ ಬ್ಯಾಂಕುಗಳ
ಗ್ರಾಮೀಣ ಶಾಖೆಗಳಿಗಿಂತಲೂ ಹೆಚ್ಚು ಸಮರ್ಪಕವಾಗಿ ಗ್ರಾಮೀಣ ಬ್ಯಾಂಕು
ಗಳು ಕಾರ್ಯನಿರ್ವಹಿಸಬಲ್ಲವು ಎಂಬುದರಲ್ಲಿ ಸಂದೇಹವಿಲ್ಲ. ಈ ಬ್ಯಾಂಕುಗಳ
ಕಲಾಪದ ವೆಚ್ಚ ಕಡಿಮೆ. ವ್ಯವಹಾರ ಸರಳ, ಎಲ್ಲೋ ದೂರದ ನಗರದಿಂದ ಬಂದ
ಬ್ಯಾಂಕಿನ ದೊಡ್ಡ ಕುದುರೆಯ ಚೇಷ್ಟೆ ಇವಕ್ಕಿರುವುದಿಲ್ಲ. ಸ್ಥಳೀಯರೊಂದಿಗೆ
ಮಿಳಿತವಾಗುವ, ಅವರ ನಾಡಿಯ ಮಿಡಿತವನ್ನರಿಯುವ ಸಾಮರ್ಥ್ಯ ಇವಕ್ಕಿರುತ್ತದೆ.
ಜಿಲ್ಲಾಮಟ್ಟದ ಕೃಷಿಕ ಹಾಗೂ ಗ್ರಾಮಾಭಿವೃದ್ಧಿ ಅಧಿಕಾರಿಗಳೊಂದಿಗೆ ಸಹಕರಿಸಿ
ಸಹಯೋಗ ಸ್ಥಾಪಿಸಿ ಕೆಲಸ ಮಾಡುವುದು ಇವಕ್ಕೆ ಸಾಧ್ಯ.

ಗ್ರಾಮೀಣ ಬ್ಯಾಂಕುಗಳು ಗ್ರಾಮೀಣ ಜನರನ್ನು ಮೇಲೆತ್ತುವಲ್ಲಿ ವಿಫಲ
ಗೊಂಡಿವೆ ಎಂಬ ಟೀಕೆಯು ಅಲ್ಲಲ್ಲಿ ಕೇಳಿಬರುತ್ತಿದೆ. ಈ ಬ್ಯಾಂಕುಗಳ ಬಹುತೇಕ
ಫಲಾನುಭವಿಗಳು ಶ್ರೀಮಂತ ರೈತರೇ ಹೊರತು ಚಿಕ್ಕ ಪುಟ್ಟ ರೈತರಲ್ಲ ಎನ್ನಲಾಗು
ತ್ತಿದೆ. ಅನೇಕ ದೊಡ್ಡ ರೈತರು ಕಾನೂನಿನ ಪ್ರಕಾರ ಸಾಲಪಡೆಯಲು ಅನರ್ಹರಾ-



ಗಿದ್ದರೂ ಸಹ ಪ್ರಾದೇಶಿಕ ಗ್ರಾಮೀಣ ಬ್ಯಾಂಕಿನಿಂದ ಸಾಲಪಡೆದಿರುವುದು ತಿಳಿದು
ಬಂದಿದೆ. ಇದಕ್ಕೆಲ್ಲಾ ಮುಖ್ಯ ಕಾರಣ ಬ್ಯಾಂಕ್ ಅಧಿಕಾರಿಗಳು ಶಾಮೀಲಾಗಿರುವುದು,
ಅವರ ಭ್ರಷ್ಟಾಚಾರ ಹಾಗೂ ಸ್ಥಳೀಯ ಮುಂಖಡರ ಪ್ರಭಾವ ಈ ಬಗೆಯ ಸನ್ನಿವೇಶದ
ಅಡಚಣೆಗಳಿಂದಾಗಿ ಗ್ರಾಮೀಣ ಜನ ಕೆಲವೆಡೆಗಳಲ್ಲಿ ತಮಗೆ ಬರಬೇಕಾದ ಸಾಲನ್ನು
ಪಡೆಯದಿರಬಹುದು. ಸಾಲಗಾರರು 'ಬಾಕಿ ಇಲ್ಲ' ಎಂಬ ಪ್ರಮಾಣ ಪತ್ರವನ್ನು
ತರಲು ಬಹಳಷ್ಟು ಕಷ್ಟ ಅನುಭವಿಸಬೇಕಾಗಿದೆಯೆಂದೂ, ಅದಕ್ಕಾಗಿ ಸಮಯ, ಹಣ
ಮತ್ತು ಶಕ್ತಿಯನ್ನು ವ್ಯಯಮಾಡಿ ಬ್ಯಾಂಕಿನಿಂದ ಬ್ಯಾಂಕಿಗೆ ಅಲೆಯಬೇಕಾಗಿದೆ
ಯೆಂಬುವುದು ಮತ್ತೊಂದು ದೂರು. ಈಗ ಇದಕ್ಕಾಗಿ ಪಾಸ್ ಪುಸ್ತಕದ ವ್ಯವಸ್ಥೆ
ಮಾಡಲಾಗಿದೆ. ಸಾಲಮಂಜೂರಾತಿ ವಿತರಣೆ ಮತ್ತು ಮರುಪಾವತಿಗೆ ಸಂಬಧಿಸಿದ
ವಿಷಯಗಳೆಲ್ಲವನ್ನು ನಮೂದಿಸಬೇಕಾದ ಈ ಪಾಸ್ ಪುಸ್ತಕವನ್ನು ಸಾಲಪಡೆಯುವಾಗ
ಮತ್ತು ಮರುಪಾವತಿ ಮಾಡುವಾಗ ಬಾಕಿ ಇಲ್ಲವೆಂಬ ಪ್ರಮಾಣ ಪತ್ರದ ಬದಲು
ತೋರಿಸಲೇ ಬೇಕು. ಕೆಲವು ಸಣ್ಣ ರೈತರು ಗ್ರಾಮೀಣ ಬ್ಯಾಂಕಿನ ಸಾಲಪಡೆಯಲು
ಆಡಳಿತಾತ್ಮಕ ಕಾನೂನಿನ ಬಿಗಿಕ್ರಮಗಳು ಮುಖ್ಯ ಅಡಚಣೆಯಾಗಿವೆಯೆಂದೂ ಸಾಲ
ಪಡೆಯುವ ಅರ್ಹತೆಯ ಮಾನದಂಡ ಬಹಳ ಕಟ್ಟುನಿಟ್ಟಿನದಾಗಿದೆಯೆಂದು
ಅಭಿಪ್ರಾಯ ಪಟ್ಟಿದಾರೆ. ಈ ಬ್ಯಾಂಕುಗಳಲ್ಲಿರುವ ಕುಂದು ಕೊರತೆಗಳನ್ನು ಮತ್ತು
ದುರಾಡಳಿತವನ್ನು ನಿವಾರಿಸಿದರೆ ಇವು ಗ್ರಾಮೀಣ ಅಭಿವೃದ್ಧಿಗೆ ಹೆಚ್ಚಿನ ಕೊಡುಗೆ
ಸಲ್ಲಿಸಬಲ್ಲವು.

ಆದರೆ ಎಷ್ಟು ನ್ಯೂನತೆಗಳಿದ್ದರೂ ಗ್ರಾಮೀಣ ಬ್ಯಾಂಕುಗಳು ಗ್ರಾಮೀಣ
ಜನರ ಉದ್ಧಾರಕ್ಕಾಗಿ ಬೇಕು ಬೇಕು. ಈ ಬ್ಯಾಂಕುಗಳು ಸಣ್ಣರೈತರ,
ಕುಶಲ ಕರ್ಮಿಗಳು, ಭೂರಹಿತ ಕಾರ್ಮಿಕರು ಮುಂತಾದ ದುರ್ಬಲ ವರ್ಗಗಳ
ಬಾಳಿನ ಆಶಾಜ್ಯೋತಿಗಳೆನಿಸಿವೆ. ಇವರು ತಮ್ಮ ಬಳಕೆಗಾಗಿ ಮತ್ತು ಉತ್ಪಾದನೆ
ಗಾಗಿ ಸಾಕಷ್ಟು ಆದಾಯ ಹೊಂದಿರದಷ್ಟು ಬಡವರಾಗಿರುವುದರಿಂದ ಇವರಿಗೆ
ಸಾಲದ ಅಗತ್ಯ ಅತಿ ಹೆಚ್ಚು. ಇವರು ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದಿರು-
ವುದರಿಂದ ತಮ್ಮದೇ ಆದ ವ್ಯಾಪಾರ ವಹಿವಾಟನ್ನೂ ಪ್ರಾರಂಭಿಸಲಾರರು. ಯಾವುದೇ
ಸಾಹಸದ ಹೊಸಕಾರ್ಯವನ್ನು ಕೈಗೊಳ್ಳಲಾಗದಷ್ಟು ಅವರ ಸಮಾಜಿಕ ಪರಿಸ್ಥಿತಿ
ದುರ್ಬಲವಾಗಿದೆ. ಇಂತಹವರಿಗೆ ಗ್ರಾಮೀಣ ಬ್ಯಾಂಕುಗಳಿಂದ ಬೇಕಾದಷ್ಟು
ಅನುಕೂಲವಾಗಿರುವುದು ಕಂಡು ಬಂದಿದೆ. ಅವರು ಸಾಲ ಪಡೆದು ರೇಷ್ಮೆ ಉದ್ಯೋಗ,
ಹಂದಿ ಸಾಕಣೆ, ಪಶುಪಾಲನೆ ಮುಂತಾದ ಕಸುಬುಗಳನ್ನು ಕೈಗೊಂಡಿದ್ದಾರೆ,
ಸಾಮಾನ್ಯ ರೈತರಿಗೆ ದಿನ ಬಳಕೆಯ ಕಾರ್ಯಗಳಿಗೆ ಮತ್ತು ಉತ್ಪಾದನೆಯ
ಉದ್ದೇಶಗಳಿಗೆ ಸಾಲ ಕೊಡುವ ಮೂಲಕ ಗ್ರಾಮೀಣ ಬ್ಯಾಂಕುಗಳು ಅವರ
ಜೀವನ ಮಟ್ಟವನ್ನು ಸುಧಾರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಿವೆ.

ಭಾರತ ಜಗತ್ತಿನಲ್ಲೇ ಅತಿ ದೊಡ್ಡ ಕೃಷಿ ಪ್ರಧಾನ ದೇಶವಾದರೂ ಸ್ವಾತಂತ್ರ್ಯ ನಂತರ ಬಹಳ ವರ್ಷಗಳವರೆಗೆ ಕೃಷಿಯ ವಿಸ್ತೀರ್ಣಕ್ಕೆ ತಕ್ಕಂತೆ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅಳವಡಿಸಲಿಲ್ಲ. ಇದರಿಂದಾಗಿ ಕೃಷಿ, ಆಹಾರ ಸ್ವಾವಲಂಬನೆ, ಗ್ರಾಮೀಣ ಪಗ್ರತಿ ಹಾಗೂ ಉದ್ದಿಮೆಗಳ ಬೆಳವಣಿಗೆ ಕುಂಠಿತಗೊಂಡಿತು. ಇಂತಹ ಪರಿಸ್ಥಿತಿಯಲ್ಲಿ ತಡವಾಗಿಯಾದರೂ ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿಯ ಸರ್ವಾಂಗೀಣ ಬೆಳವಣಿಗೆಯನ್ನು ಸಾಧಿಸುವಂತಹ ಗ್ರಾಮೀಣ ಬ್ಯಾಂಕುಗಳ ಕಾರ್ಯಕ್ರಮವನ್ನು ಜಾರಿಗೆ ತಂದದ್ದು ಸುದೈವವೇ ಸರಿ. ಮುಂದಿನ ದಶಕದಲ್ಲಿ ಇನ್ನು ಹೆಚ್ಚೆಚ್ಚು ಪ್ರಮಾಣದಲ್ಲಿ ಗ್ರಾಮೀಣ ಬ್ಯಾಂಕುಗಳು ಸ್ಥಾಪನೆಗೊಂಡು ಗ್ರಾಮೀಣ ಪ್ರದೇಶದ ಜನರ ಜೀವನ ಮಟ್ಟವನ್ನು ಸುಧಾರಿಸುತ್ತವೆಂದು ಭಾವಿಸಲಾಗಿದೆ.





# ಭಾರತದಲ್ಲಿ ಸಮೂಹ ಮಾಧ್ಯಮದ ಬೆಳವಣಿಗೆ

ರೇಡಿಯೋ, ದೂರದರ್ಶನ, ಮುದ್ರಣ–ಮೊದಲಾದ ಸಮೂಹ ಮಾಧ್ಯಮಗಳ ಮೂಲಕ ಸಾಮೂಹಿಕ ಸಂಪರ್ಕ ಸಾಧ್ಯತೆಯೇ ಸಮೂಹ ಸಂಪರ್ಕ ವ್ಯವಸ್ಥೆ. ತಮ್ಮ ಭಾವನೆ, ಆಲೋಚನೆ, ಅನುಭವಗಳನ್ನು ಪರಸ್ಪರ ಹಂಚಿಕೊಳ್ಳುವ ಅಭಿವ್ಯಕ್ತಿ ಮಾಧ್ಯಮ ಜನಸಂಖ್ಯೆಯ ಹೆಚ್ಚಳದೊಂದಿಗೆ ಹಾಗೂ ಜನರ ಅಗತ್ಯಗಳು ವ್ಯವಸ್ಥೆಯೂ ಬೆಳವಣಿಗೆಯಾಗಬೇಕಾಯಿತು. ಇದನ್ನರಿತು ಪಂಚವಾರ್ಷಿಕ ಯೋಜನೆಯಲ್ಲಿ ಇದಕ್ಕೆ ಆದ್ಯತೆ ನೀಡಲಾಯಿತು. ಇದರ ಪರಿಣಾಮ ವರ್ಷದಿಂದ ವರ್ಷಕ್ಕೆ–ಸಮೂಹ ಸಂಪರ್ಕ ವ್ಯವಸ್ಥೆಯ ಅಭಿವೃದ್ಧಿ.

ಇಂದಿನ ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಸಂಪರ್ಕ ವ್ಯವಸ್ಥೆ ವ್ಯಕ್ತಿ ಚಟುವಟಿಕೆಯ ಕೇಂದ್ರಬಿಂದು. ಈ ಕಾರಣದಿಂದ ಹಳ್ಳಿ ಹಳ್ಳಿಗಳಲ್ಲಿ ಹಿಂದುಳಿದ ಪ್ರದೇಶಗಳಲ್ಲಿ ಇದರ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಲಾಯಿತು. ಸರ್ಕಾರ ಈ ನಿಟ್ಟಿನಲ್ಲಿ, - ಹೊಸ ರೀತಿಯ ತಾಂತ್ರಿಕ ವ್ಯವಸ್ಥೆಗಳಾದ ಉಪಗ್ರಹ ವ್ಯವಸ್ಥೆ, ದೂರದರ್ಶನ, ತಂತಿ ಸಂಪರ್ಕವೇ ಮೊದಲಾದ ತಾಂತ್ರಿಕ ರೀತಿಯನ್ನು ಅನುಸರಿಸಿತು.

1927 ರಲ್ಲಿ ಭಾರತೀಯ ಆಕಾಶವಾಣಿ ಪ್ರಸಾರ ಕಾರ್ಯಕ್ಕೆ ತೊಡಗಿತು. ಆದರೆ ಬಹಳ ಮಂದಗತಿಯಲ್ಲಿ ಮುಂದುವರಿಯುತ್ತಾ 20 ವರ್ಷಗಳ ನಂತರವೂ ಕೇವಲ 6 ಪ್ರಸಾರ ಕೇಂದ್ರಗಳನ್ನು ದೇಶ ಹೊಂದಿತ್ತು. ದೇಶದ ಇಡಿಯ ಜನಸಂಖ್ಯೆಯಲ್ಲಿ ಕೇವಲ ಶೇಕಡ 11 ಜನರಿಗೆ ಮಾತ್ರ ಈ ಸೌಲಭ್ಯ ದೊರಕಿತು. 1956 ರಲ್ಲಿ 26 ಕೇಂದ್ರಗಳಿದ್ದು ಶೇಕಡ 46 ಜನರಿಗೆ ಈ ಸೌಕರ್ಯ ಲಭ್ಯವಾಯಿತು. ಹಾಗೆಯೇ 1966ರಲ್ಲಿ 54 ಕೇಂದ್ರಗಳು, 1978ರಲ್ಲಿ 84 ಕೇಂದ್ರಗಳು ಹಾಗೂ 1987 ಮಾರ್ಚ್ 31ರಲ್ಲಿ 93 ಆಕಾಶವಾಣಿ ಕೇಂದ್ರಗಳನ್ನು ದೇಶ ಹೊಂದಿದೆ.

ಉಪಗ್ರಹ ವ್ಯವಸ್ಥೆಯಿಂದ ಆಕಾಶವಾಣಿ ಸಂಪರ್ಕ ವ್ಯವಸ್ಥೆಯ ಗಣನೀಯ ಬೆಳವಣಿಗೆಯ ಪ್ರಾರಂಭ. ಹೆಚ್ಚಿನ ಎಲ್ಲಾ ಆಕಾಶವಾಣಿ ಕೇಂದ್ರಗಳು ನೇರವಾಗಿ ಇನ್ಸಾಟ್- 1ಬಿಯಿಂದ ಕಾರ್ಯಕ್ರಮಗಳನ್ನು ಸ್ವೀಕರಿಸುತ್ತವೆ.

1952ರಲ್ಲಿ ಸಮಾಚಾರ ಸೇವಾ ವಿಭಾಗವು 72 ಸಮಾಚಾರಗಳನ್ನು 27

ಭಾಷೆಗಳಲ್ಲಿ ಪ್ರಸಾರ ಮಾಡಿತು. 1960 ರಲ್ಲಿ ಈ ಸಂಖ್ಯೆ 91ಕ್ಕೆ ಹಾಗೂ 1980ರಲ್ಲಿ 207ಕ್ಕೆ ಏರಿತ್ತು. ಇಂದು ಆಕಾಶವಾಣಿ 273 ಸಮಾಚಾರಗಳನ್ನು ದಿನಪ್ರತಿ ಪ್ರಸಾರ ಮಾಡುತ್ತಿದೆ

**ದೂರದರ್ಶನ** 1959 ಸೆಪ್ಟೆಂಬರ್ 15ರಂದು ದೆಹಲಿಯಿಂದ ಪ್ರಥಮ ಬಾರಿಗೆ ದೂರ ದರ್ಶನದ ಪ್ರಾಯೋಗಿಕ ಕಾರ್ಯದ ಪ್ರಾರಂಭ. ವಾರದಲ್ಲಿ ಎರಡು ಬಾರಿ, 60 ನಿಮಿಷಗಳ ಈ ಕಾರ್ಯಕ್ರಮ 12 ರಿಂದ 15 ಮೈಲಿಗಳ ವ್ಯಾಪ್ತಿಯನ್ನು ಹೊಂದಿತ್ತು.

1959 ರಲ್ಲಿ ಕೇವಲ ಒಂದು ದೂರದರ್ಶನ ನಿಸ್ತಂತುವಿದ್ದು 1973 ಕ್ಕೆ 5 ಹಾಗೂ 1983ರಲ್ಲಿ 42 ಕ್ಕೇರಿತು. 1984ರಲ್ಲಿ 166 ಹಾಗೂ 1987ರಲ್ಲಿ 209 ದೂರದರ್ಶನ ನಿಸ್ತಂತುಗಳು ಕಾರ್ಯಪ್ರವೃತ್ತವಾದುವು.

ದೂರದರ್ಶನ ಜನಪ್ರಿಯವಾಗುತ್ತಿದ್ದ ಹಾಗೇ ಆ ಮೂಲಕ ಪ್ರೌಢಶಾಲೆಗಳಿಗೆ ಶಿಕ್ಷಣ ಪ್ರಸಾರ ಕಾರ್ಯಕ್ರಮದ ಪ್ರಾರಂಭವಾಯಿತು. ಅನೇಕ ವಿಷಯಗಳನ್ನೊ ಳಗೊಂಡು 1961 ರಲ್ಲಿ ದೂರದರ್ಶನ, ಈ ರೀತಿಯ ಶೈಕ್ಷಣಿಕ ಕಾರ್ಯಕ್ರಮ ವನ್ನು ಪ್ರಸಾರ ಮಾಡತೊಡಗಿತು.

ಸುಮಾರು ಶೇಕಡಾ 70 ಜನ ಕೃಷಿಯನ್ನೇ ಆಧರಿಸಿರುವುದರಿಂದ ರೈತರಿ ಗಾಗಿ 'ಕೃಷಿ ದರ್ಶನ' ಎಂಬ ಪ್ರತ್ಯೇಕ ಕಾರ್ಯಕ್ರಮ 1967 ರಿಂದ ಪ್ರಸಾರ ವಾಗತೊಡಗಿತು.

1975 ಅಗಸ್ಟ್‌ನಲ್ಲಿ 'ಉಪಗ್ರಹ ನಿರ್ದೇಶಿತ ದೂರದರ್ಶನ ಪ್ರಯೋಗ' ದೊಂದಿಗೆ (ಸೆಟಲೈಟ್ ಇನ್‌ಸ್ಟ್ರಕ್‌ನಲ್ ಟೆಲಿವಿಷನ್ ಎಕ್ಸ್‌ಪರಿಮೆಂಟ್) ಭಾರತ ಅಂತರಿಕ್ಷ ಯುಗಕ್ಕೆ ಕಾಲಿಟ್ಟಿತು.

1982ರಲ್ಲಿ ಇನ್ಸಾಟ್—1ಎ ಉಪಗ್ರಹ ಉಡಾವಣೆಯೊಂದಿಗೆ ಇನ್ಸಾಟ್ ಯೋಜನೆಯಲ್ಲಿ ರಾಷ್ಟ್ರೀಯ ಕಾರ್ಯಕ್ರಮಗಳು ಆರಂಭವಾದವು. ಮೊದಲಿಗೆ ಕೇವಲ ಕಪ್ಪು—ಬಿಳುಪು ಪ್ರಸಾರವನ್ನು ಹೊಂದಿದ್ದ ದೂರದರ್ಶನ 1982 ಅಗಸ್ಟ್ 15 ರಿಂದ ಬಣ್ಣದ ಪ್ರಸಾರವನ್ನು ನೀಡತೊಡಗಿತು. 1984 ಸೆಪ್ಟೆಂಬರ್ 17 ರಿಂದ ದೆಹಲಿಯಲ್ಲಿ ಹಾಗೂ 1985 ಮೇ ಒಂದರಿಂದ ಮುಂಬೈನಲ್ಲಿ ಎರಡನೇ ವಾಹಕದ ಅನುಷ್ಠಾನ ದೂರದರ್ಶನದ ಬೆಳವಣಿಗೆಯ ಇನ್ನೊಂದು ಹಂತ. 1985 ನವಂಬರ್ 19ರಂದು ಇನ್‌ಟೆಸ್ಟ್ ಎಂಬ ಹೊಸ ಪ್ರಯೋಗದ ಪ್ರಾರಂಭವಾಯಿತು. 1987 ಫೆಬ್ರವರಿ 23 ರಿಂದು 45 ನಿಮಿಷಗಳ ಬೆಳಗಿನ ಪ್ರಸಾರವನ್ನು ದೂರದರ್ಶನ ಬಿತ್ತರಿಸತೊಡಗಿತು.



**ಮುದ್ರಣಾಲಯ ಹಾಗೂ ಮುದ್ರಣ ಮಾಧ್ಯಮಗಳು.**

1780 ಜನವರಿ 20 ರಂದು ಜೇಮ್ಸ್ ಅಗಸ್ಟಸ್‌ನ 'ಬಂಗಾಲ ಗೆಜೆಟ್' ನ ಪ್ರಕಟಣೆಯ ಬಗ್ಗೆ ಚರ್ಚೆಗಳಾದರೂ ಭಾರತದಲ್ಲಿ ಮುದ್ರಣಾಲಯಗಳ ಬೆಳವಣಿಗೆ ಯಾದದ್ದು ಸ್ವಾತಂತ್ರ್ಯ ನಂತರವೇ. 1947 ರಲ್ಲಿ ಕೇವಲ 330 ರಷ್ಟಿದ್ದ ದಿನ ಪತ್ರಿಕೆಗಳ ಸಂಖ್ಯೆ ಅಧಿಕವಾಗುತ್ತಾ 1980 ಕ್ಕಾಗುವಾಗ 18. 140 ಹಾಗೂ 1985 ರಲ್ಲಿ 22. 648 ರಷ್ಟಾಯಿತು.

ಭಾಷೆಯನ್ನು ಆಧರಿಸಿ ವಿಭಾಗಿಸಿದಾಗ ಹಿಂದಿ ಭಾಷೆಯಲ್ಲಿ ಅತ್ಯಧಿಕ ಪ್ರಸಾರ ಕಂಡು ಬರುತ್ತದೆ (6831); ಇಂಗ್ಲೀಷ್ (4099); ಉರ್ದು (1562); ಬಂಗಾಲಿ (1502); ತೆಲುಗು (1378) ಹಾಗೂ ಮರಾಠಿ (1131).

ಅತ್ಯಧಿಕ ವಾರ್ತಾ ಪತ್ರಿಕೆಗಳು ಉತ್ತರ ಪ್ರದೇಶದಲ್ಲಿ ಪ್ರಕಟಗೊಂಡು (3209); ದೆಹಲಿ (2895); ಮಹಾರಾಷ್ಟ್ರ (2748); ಕೇರಳ (1130); ಕರ್ನಾಟಕ (1128) ರಾಜ್ಯಗಳನ್ನು ಅನುಸರಿಸುತ್ತದೆ. ಪತ್ರಿಕೆಗಳ ಚಲಾವಣೆಯಲ್ಲೂ ಗಣ ನೀಯವಾದ ಬೆಳವಣಿಗೆ ಕಂಡುಬರುತ್ತದೆ. 1923 ರಲ್ಲಿ 2.5 ಲಕ್ಷ ಪತ್ರಿಗಳು ವಿತರಣೆಯಾಗುತ್ತಿದ್ದು 1985 ರಲ್ಲಿ 619.81 ಲಕ್ಷಗಳಾಗಿವೆ.

**ಶ್ರಾವಣಿಕ ಹಾಗೂ ದೃಶ್ಯ ಮಾಧ್ಯಮ**

1912 – 13 ರಲ್ಲಿ ಭಾರತದಲ್ಲಿ ಆರಂಭಗೊಂಡ ಚಲನಚಿತ್ರಗಳಲ್ಲಿ ಸಂಭಾ ಷೆಗಳಿರಲಿಲ್ಲ. ಕೇವಲ ನಟನೆಗಳಿಂದ ಕೂಡಿದ ಈ ಚಿತ್ರಗಳು ಮೂಕ ಚಿತ್ರಗಳಾಗಿ ದ್ದುವು. 1931 ರಲ್ಲಿ ನಟನೆಯ ಜೊತೆಗೆ ಸಂಭಾಷಣೆಯೂ ಸೇರಿಕೊಂಡು ಚಲನಚಿತ್ರಗಳು ಪ್ರದರ್ಶಿತವಾಗತೊಡಗಿದುವು. ಸ್ವಾತಂತ್ರ್ಯಾನಂತರ ಬಹಳ ವೇಗ ದಲ್ಲಿ ಈ ಮಾಧ್ಯಮ ಮುಂದುವರಿಯತೊಡಗಿತ್ತು. 1947ಕ್ಕೆ 201 ರಷ್ಟಿದ್ದ ಉತ್ಪಾದನೆ 1985ಕ್ಕೆ 912ರಷ್ಟಾಯಿತು ಇಂದಿನವರೆಗೆ ಸುಮಾರು 17,000 ಚಲನಚಿತ್ರಗಳನ್ನು ಉತ್ಪಾದಿಸಿದ ಭಾರತ ಸಿನಿಮಾ ಉತ್ಪಾದನೆಯಲ್ಲಿ ಮೇಲುಗೈ ಸಾಧಿಸಿದೆ. 1948 ರಲ್ಲಿ ಸ್ಥಾಪನೆಯಾದ 'ಚಲನಚಿತ್ರ' ವಿಭಾಗ ದಿಂದಾಗಿ ಭಾರತ ಲೋಕದ ಸಿನಿಮಾ ಉತ್ಪಾದಿತ ದೇಶಗಳಲ್ಲಿ ಹೆಸರು ಪಡೆದಿದೆ.

ಚಲನಚಿತ್ರ ಉದ್ಯಮದ ಅಭಿವೃದ್ಧಿಯ ದೃಷ್ಟಿಯಿಂದ 1980 ಎಪ್ರಿಲ್‌ನಲ್ಲಿ ಸರ್ಕಾರ ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ಸಂಘವನ್ನು ಸ್ಥಾಪಿಸಿದೆ. ಈ ಉದ್ಯಮ ಗಳಿಗೆ ಆರ್ಥಿಕ ನೆರವನ್ನು ನೀಡುವ ವ್ಯವಸ್ಥೆಯನ್ನು ಮಾಡಲಾಗಿದೆ. ಇಲ್ಲಿಯವರೆಗೆ ಈ ಸಂಸ್ಥೆ 157 ವಿಶೇಷ ಚಿತ್ರ ಹಾಗೂ 58 ದಾಖಲೆ ಚಿತ್ರಗಳಿಗೆ ಆರ್ಥಿಕ ಸಹಾಯ ಒದಗಿಸಿದೆ. ಈ ಸಂಸ್ಥೆಯಿಂದ ಆರ್ಥಿಕ ಸಹಾಯ ಪಡೆದ ಚಲನಚಿತ್ರಗಳು 116 ರಾಷ್ಟ್ರೀಯ ಹಾಗೂ 28 ಅ.ತರರಾಷ್ಟ್ರೀಯ ಪ್ರಶಸ್ತಿಗಳನ್ನು ಗೆದ್ದುಕೊಂಡಿದೆ.




# ಮಹಾನ್ ಯೋಧ ಸ್ವಾತಂತ್ರ್ಯ ಹೋರಾಟಗಾರ-ಬಾಬು ಕನ್ವರ್ ಸಿಂಗ್

ಭಾರತ ಸರ್ಕಾರದ ವಾರ್ತಾ ಶಾಖೆ ಬೆಂಗಳೂರು

ಪ್ರತಿಯೊಂದು ಯುಗದಲ್ಲಿಯೂ ಮಹಾಪುರುಷರು ಜನ್ಮತಾಳುತ್ತಾರೆ. ಕೆಲವರು ತಮ್ಮ ಜೀವಿತ ಕಾಲದಲ್ಲಿ ಪ್ರಸಿದ್ಧರಾಗಿ ಕಾಲ ಸರಿದಂತೆ ಮರೆಯಾಗುತ್ತಾರೆ. ಆದರೆ ಇನ್ನು ಕೆಲವರು ಹಾಗಲ್ಲ. ಕಾಲಾತೀತರಾಗಿ ಜನಮನದಲ್ಲಿ ಅಚ್ಚಳಿಯದೆ ನಿಲ್ಲಬಲ್ಲವರು. ಸ್ವಾತಂತ್ರ್ಯ ಹೋರಾಟಗಾರ ಬಾಬು ಕನವರ್ ಸಿಂಗ್ ಈ ಗುಂಪಿಗೆ ಸೇರಿದವರು.

ಅನೇಕ ಭಾರತೀಯರಿಗೆ ಇವರ ಪರಿಚಯವಿಲ್ಲದಿರಬಹುದು. ಆದರೆ ಬ್ರಿಟೀಷ್ ಆಡಳಿತದ ವಿರುದ್ಧ ಹೋರಾಡಿದ ಮಹನೀಯರ ಸಾಲಿನಲ್ಲಿ ಇವರೂ ಒಬ್ಬರೆಂಬುದು ನಿಸ್ಸಂಶಯ. 1857–59 ರಲ್ಲಿ ವೈರಿಗಳನ್ನು ಎದುರಿಸಿ ಹೋರಾಡಿದ ಇವರ ಅದಮ್ಯ ಸಾಹಸ ಸ್ವಾತಂತ್ರ್ಯ ಚಳವಳಿಯ ಚಾರಿತ್ರಿಕ ಪುಟಗಳಲ್ಲಿ ತುಂಬಿ ಹೋಗಿವೆ.

ವ್ಯಕ್ತಿತ್ವ:

ಬಿಹಾರಿನ ಜಗದೀಶಪುರ ವನ್ನು ಆಳಿಕೊಂಡಿದ್ದ ಸಿಂಗ್ ರಜಪೂತ ಮನೆತನಕ್ಕೆ ಸೇರಿದವರು. ಕಲೆ, ವಿದ್ಯೆಯಲ್ಲಿ ವಿಶೇಷ ಆಸಕ್ತಿ. ಯಾವುದೇ ರೀತಿಯ ವಿಶೇಷ-ವಿದ್ಯಾಭ್ಯಾಸ ವಿಲ್ಲದಿದ್ದರೂ ಇವರ ವ್ಯವಹಾರಜ್ಞಾನ ತಿಳಿವಳಿಕೆ ಅಪಾರವಾಗಿತ್ತು. ತನ್ನ ದೇಶ ಹಾಗೂ ನೇಪಾಳದಲ್ಲಿ ಕೈಗೊಂಡ ಅನೇಕ ಪ್ರವಾಸಗಳು ಇವರ ವಿದ್ಯಾಭ್ಯಾಸದ ಕೊರತೆಯನ್ನು ನೀಗಿಸಿದ್ದುವು. ದೇವರ ಬಗ್ಗೆ ಅಪಾರ ನಂಬಿಕೆಯಿದ್ದ ಇವರು ಪ್ರತಿರಾತ್ರಿ ಪವಿತ್ರ ಗ್ರಂಥಪಠನೆ ಮಾಡುತ್ತಿದ್ದರು. ಧಾರ್ಮಿಕ ವಿಚಾರಗಳಲ್ಲಿ ಹಾಗೂ ಇನ್ನಿತರ ಒಳ್ಳೆಯ ಕಾರಣಗಳಿಗೆ ಉದಾರವಾಗಿ ದಾನ ಮಾಡುವ ಧಾರಾಳತನವನ್ನು ತೋರಿಸುತ್ತಿದ್ದರು. ತಮ್ಮ ಸ್ವಾರ್ಥಕ್ಕಾಗಿ ಬ್ರಿಟಿಷ್ ಸರ್ವಾಧಿಕಾರವನ್ನು ಒಪ್ಪಿಕೊಂಡಿದ್ದ ಇತರ ಕೆಲವು ಸಾಮಂತರಿಗೆ ಸಿಂಗರ ಈ ಸ್ವಾಭಾವ ಹಿಡಿಸುತ್ತಿರಲಿಲ್ಲ.

ಈಸ್ಟ್ ಇಂಡಿಯಾ ಕಂಪನಿಯ ಭ್ರಷ್ಟಾಚಾರದ ವಿರುದ್ಧ ಆರಂಭದಿಂದಲೇ ಸಿಂಗ್ ಪ್ರತಿಭಟಿಸುತ್ತಿದ್ದರು. ಬ್ರಿಟಿಷರಿಗೆ ಇವರೊಂದು ಸಮಸ್ಯೆಯೇ ಆಗಿದ್ದರು. ಬ್ರಿಟಿಷರ ಅಧಿಕಾರವನ್ನು ನಾಶಮಾಡುವುದೊಂದೇ ಇವರ ಉದ್ದೇಶವಾಗಿರದೆ ಭಾರತೀಯರ ಅಭಿರುಚಿಗೆ ಹೊಂದಿಕೆಯಾಗುವ ದಕ್ಷ ಸರಕಾರ ನಿರ್ಮಾಣದ ಗುರಿಯನ್ನು ಹೊಂದಿದ್ದರು. ಎರಡು ಮಾತಿಲ್ಲದೆ ಇವರ ನಾಯಕತ್ವವನ್ನು ಸರ್ವರೇ ಅಂಗೀಕರಿಸಿದ್ದರು.

1857. ಭಾರತದ ಇತಿಹಾಸದಲ್ಲಿ ದಾಖಲೆ ನಿರ್ಮಿಸಿದ ಸಮಷ್ಟಿ ಹೋರಾಟದ ದಿನ 'ವಿಾರತ್' ಹಾಗೂ 'ದಾನಪುರ' ದ ಜ್ಯೋತಿಗಳು ರಾಷ್ಟ್ರೀಯ ಕ್ರಾಂತಿಕಾರರ ಸಂಜ್ಞಾಜ್ಯೋತಿಗಳಾಗಿ 90 ವರ್ಷಗಳ ಕಾಲ ಎಂದರೆ ಸ್ವಾತಂತ್ರ್ಯದವರೆವಿಗೆ ನಿರಂತರವಾಗಿ ಬೆಳಗುತ್ತಿತ್ತು.

ದಾನಪುರದಲ್ಲಿ ಭಾರತೀಯ ಸೈನಿಕರ ನಾಯಕತ್ವವನ್ನು ವಹಿಸಿದ ಕನ್ವರ್ ಸಿಂಗ್ ವಿದೇಶೀ ಅಧಿಕಾರಿಗಳ ವಿರುದ್ಧ ಸತತ ಹೋರಾಟಗೈದರು. ಬಿಹಾರದ ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಕ್ಕೆ ಇಂದೊಂದು ಪಂಥಾಹ್ವಾನವಾಗಿತ್ತು. ಸೈನಿಕರೆಲ್ಲಾ ಕನ್ವರ್ ಸಿಂಗ್ ಅಜ್ಞಾನವರ್ತಿಗಳಾದರು,

ಬ್ರಿಟಿಷ್ ಹೆದ್ದರಿಯನ್ನು ಈಸಿ ಜಯಿಸಲು ಹೊರಟಿದ್ದ ಸಿಂಗ್ ಅನೇಕ ರಾಷ್ಟ್ರ ಪ್ರೇಮಿಗಳನ್ನು ಉತ್ತೇಜಿಸುವಲ್ಲಿ ಸಫಲರಾದರು. ಎದುರಾಗುತ್ತಿರುವ ಯಾವುದೇ ಅಪಾಯವೂ ಇವರನ್ನು ಎದೆಗುಂದಿಸಲಿಲ್ಲ. ಇವರ ನೈತಿಕ ಸ್ಥೈರ್ಯವನ್ನು ಯಾವುದೇ ರೀತಿಯಲ್ಲೂ ಬ್ರಿಟಿಷರಿಗೆ ಅಲುಗಿಸಲಾಗಲಿಲ್ಲ. ಇದಕ್ಕೆ ಬದಲಾಗಿ ಸಿಂಗರ ಹೋರಾಟ ಮತ್ತಷ್ಟು ಬಲವಾಯಿತು. ಜಗದೀಶಪುರದಲ್ಲಿ ಆರು ತಿಂಗಳಿಗೆ ಸಾಕಾಗುವಷ್ಟು ಆಹಾರ ಸಾಮಗ್ರಿಗಳ ಸಂಗ್ರಹಣೆ ಹಾಗೂ ಶಸ್ತ್ರ ಕಾರ್ಖಾನೆಯನ್ನು ಇವರು ಸ್ಥಾಪಿಸಿದರು.

## ಬ್ರಿಟಿಷರ ರಾಜ್ಯ ವ್ಯವಸ್ಥೆಯಲ್ಲಿ ವಿಷಮಸಂಧಿ

ಕನ್ವರ್‌ಸಿಂಗ್‌ರ ಈ ಪಂಥಾಹ್ವಾನ ಈಸ್ಟ್ ಇಂಡಿಯಾ ಕಂಪನಿಯವರಿಗೆ ಸಂಧಿಗ್ಧಕ್ಕಿಟ್ಟುಕೊಂಡಿತು. ಬ್ರಿಟಿಷ್ ಸರ್ವಾಧಿಕಾರದ ವಿರುದ್ಧ ಸಾರ್ವಜನಿಕ ಪ್ರತಿರೋಧ ಉಂಟಾಗುವ ರೀತಿಯಲ್ಲಿ ಸಿಂಗ್‌ರ ಸೈನಿಕರು ಜನರ ಭಾವನೆಗಳನ್ನು ಬಡಿದೆಬ್ಬಿಸಿದರು. ಪ್ರತಿರೋಧದ ಬಾವುಟಗಳು ಒಂದರ ಮೇಲೊಂದರಂತೆ ಹಾರತೊಡಗಿದವು. ಬಿಹಾರ್‌ನಲ್ಲಿ ಹೆಚ್ಚಿನವರು ಭೂಮಾಲಿಕರಾದ್ದರಿಂದ ತಮ್ಮ ಸ್ವಾರ್ಥಕ್ಕಾಗಿ ಬ್ರಿಟಿಷರನ್ನು ಪ್ರೋತ್ಸಾಹಿಸುತ್ತಿದ್ದ ಇವರು ಈ ಪ್ರತಿಭಟನೆಯಲ್ಲಿ ಪಾಲ್ಗೊಳ್ಳಲಿಲ್ಲ.

ಇಂತಹ ಪರಿಸ್ಥಿತಿಯಲ್ಲೂ 'ಶಹಬಾದ್' ನ ಕೆಲವು ಕಡೆಗಳಲ್ಲಿ ತನ್ನದೇ ಆಡಳಿತವನ್ನು ಸ್ಥಾಪಿಸಿದ ಕನ್ವರ್‌ಸಿಂಗ್‌ರ ಸಾಧನೆ ಪ್ರಶಂಸನೀಯ. ತನ್ನ ಅಧಿಕಾರವನ್ನು ಘೋಷಿಸಿದ ಅನಂತರ ಆಡಳಿತವನ್ನು ಆರಂಭಿಸಿದ ಸಿಂಗ್ ತನ್ನ ಸಾಮರ್ಥ್ಯವನ್ನು ಪ್ರದರ್ಶಿಸಿದರು. ಬ್ರಿಟಿಷರ ವಿರುದ್ಧ ಬಲವಾದ ವಿರೋಧ ಪಕ್ಷವನ್ನು ಸ್ಥಾಪಿಸುವ ರಚನಾತ್ಮಕ ಕಾರ್ಯದಲ್ಲಿ ತೊಡಗಿದ್ದರು.

'ಈಸ್ಟ್ ಇಂಡಿಯಾ ಕಂಪನಿ' ಯ ಮುಖ್ಯ ಕೊತ್ತಲಗಳಾದ ಮಿರ್ಜಾ



ಪುರ್, ಅಲಹಾಬಾದ್, ಲಕ್ನೋ, ಅಯೋಧ್ಯಾ ಮೊದಲಾದ ಕಡೆಗಳಲ್ಲಿ ಸಿಂಗ್ ಬಿರುಗಾಳಿಯಂತೆ ಮುನ್ನುಗ್ಗಿದ್ದರು. ಈ ಪ್ರದೇಶಗಳಲ್ಲಿ ಬ್ರಿಟಿಷರು ಸೋಲನ್ನನುಭವಿಸಬೇಕಾಯಿತು. ಫೋರ್ಟ್ ವಿಲಿಯಂ ಸರ್ಕಾರ ಸೋಲಿನ ಈ ಹಂತದಲ್ಲಿದ್ದಾಗ ತಮ್ಮ ಪ್ರಭುತ್ವವನ್ನು ಭದ್ರಗೊಳಿಸುವ ಸರ್ವಪ್ರಯತ್ನದಲ್ಲಿ ತೊಡಗಿದ್ದರು ಬ್ರಿಟಿಷರು. ಬಾಬು ಕನ್ವರ್‌ಸಿಂಗ್‌ರನ್ನು ತೀರಿಸಿಬಿಡುವುದು ಬ್ರಿಟಿಷರಿಗಿದ್ದ ಒಂದೇ ಒಂದು ದಾರಿಯಾಗಿತ್ತು.

ಕೊನೆಗೂ, ಬ್ರಿಟಿಷ್ ದಳಪತಿ ಡೌಗ್ಲಾಸ್ 1858, ಏಪ್ರಿಲ್ 21 ರಂದು ಕನ್ವರ್‌ಸಿಂಗ್‌ರ ಮೇಲೆ ಆಕ್ರಮಣ ಮಾಡಿದರು. ಸಿಂಗ್ ಗಾಯಗೊಂಡರೂ, ಈ ದಾಳಿಯಿಂದ ಪಾರಾದರು. ಸಿಂಗ್ ನೇತೃತ್ವದ ಪಡೆ ಬ್ರಿಟಿಷ್ ಸೈನಿಕರನ್ನು ಎದುರಿಸಲು ಧೈರ್ಯದಿಂದ ಮುನ್ನುಗ್ಗಿ ಕನ್ವರ್ ಸಿಂಗ್‌ರನ್ನು ಜಗದೀಶಪುರದ ರಕ್ಷಿತ ಆವರಣಕ್ಕೆ ಕರೆದೊಯ್ದರು.

## ಕೊನೆಯ ದಿನಗಳು

ನಿರಂತರ ಹೋರಾಟದ ಬಳಲಿಕೆ ಈ ವೃದ್ಧ ಯೋಧನ ಮೇಲೆ ಬಹಳಷ್ಟು ಭಾರವನ್ನು ಹೇರಿತು. 1959ಕ್ಕೆ ಕೆಲವು ಸಮಯ ಮೊದಲು ಇವರು ದೈವಾಧೀನರಾದರು. 1857ರ ಚಳವಳಿಯ ಮಹಾನ್ ನಾಯಕ ಹೀಗೆ ಕೊನೆಯುಸಿರೆಳೆದರು. ಜೀವಮಾನವಿಡೀ ವಿಜಯವನ್ನೇ ಸಾಧಿಸಿದ ರಣಧೀರರಾಗಿದ್ದರು ಇವರು. ಇವರೊಬ್ಬ ಯೋಧರಾಗಿದ್ದುದ್ದು ಮಾತ್ರವಲ್ಲದೆ, ಚತುರ ಯುದ್ಧ ವಿದ್ಯಾನಿಪುಣರಾಗಿದ್ದರು. ವೈರಿಗಳನ್ನು ಎದುರಿಸಲು ಸಮರ್ಥವಾಗುವ ರೀತಿಯಲ್ಲಿ ತನ್ನ ಸೇನಾಪಡೆಯನ್ನು ಇವರು ರಚಿಸಿದ್ದರು. ಇವರ ನೆನಪೇ ಸ್ಫೂರ್ತಿ ಚೇತನವಾಗಿ, ರಾಷ್ಟ್ರ ಸ್ವಾತಂತ್ರ್ಯದ ಸಾಧನೆಯತ್ತ ದೇಶೀಯರನ್ನು ಪ್ರಚೋದಿಸಿತು. ಬಿಹಾರ್‌ನಲ್ಲಿ ಚಿರಂತನ ನೆನಪಾಗಿ ಜನಮನದಲ್ಲಿವ ಸಿಂಗ್ ಉತ್ತರಪ್ರದೇಶದ ಅನೇಕ ಲಾವಣಿಗಳಲ್ಲಿ ಐತಿಹ್ಯಗಳಲ್ಲಿ ಸೇರಿಹೋದರು.

* * * * * * *

**ಶಿಸ್ತು:**

ಬಾಲ ಬಾಲಕಿಯರು ಶಾಲಾ ದಿನಗಳಲ್ಲಿ ಶಿಸ್ತನ್ನು ಕಲಿತುಕೊಳ್ಳದಿದ್ದರೆ ಅವರ ಶಿಕ್ಷಣಕ್ಕಾಗಿ ವೆಚ್ಚ ಮಾಡಿದ ಅವರ ತಂದೆ-ತಾಯಿಗಳ ಹಣವು ಅರ್ಥಾತ್ ದೇಶದ ಹಣವು ವ್ಯರ್ಥವಾದಂತೆ, ಹಾನಿಯಾದಂತೆ.

—ಗಾಂಧೀಜಿ:

# ರಾಜ ಯೋಗಿ

ಎಲ್.ಜಿ ಸ್ವಾಮಿ

ಕನ್ನಡ ನಾಡಿನ ಇತಿಹಾಸದಲ್ಲಿ ಅನೇಕ ಮಹಾ ಪುರುಷರು ಗೋಚರಿಸು-
ತ್ತಾರೆ. ರಾಜರು, ಚಕ್ರವರ್ತಿಗಳು, ಮಂತ್ರಿಗಳು, ಸಾಧಕರು, ಕಲಾವಿದರು,
ಸಂತರು, ನಾನಾ ಕ್ಷೇತ್ರಗಳಲ್ಲಿ ಕೆಲಸ ಮಾಡಿ ನಾಡಿನ ಜನತೆಗಾಗಿ ಶ್ರಮಿಸಿ ಅಮರ
ರಾಗಿರುವ ನೂರಾರು ಹೆಸರುಗಳು ಅಲ್ಲವೆ. ಇವರೇ ಕನ್ನಡನಾಡಿನ ಆಸ್ತಿ. ಇಂತಹ
ಮಹಾ ವಿಭೂತಿಗಳ ಸಾಲಿನಲ್ಲಿ ನಿಜಗುಣರೂ ಒಬ್ಬರಾಗಿದ್ದಾರೆ.

ನಿಜಗುಣರು ಕರ್ನಾಟಕದ ದಕ್ಷಿಣ ಭಾಗವಾದ ಮೈಸೂರು ಜಿಲ್ಲೆಯ,
ಕೊಳ್ಳೇಗಾಲ ತಾಲ್ಲೋಕಿನ ಚಿಲಕವಾಡಿ ಗ್ರಾಮದ ಸುತ್ತ ಮುತ್ತಲ ಸಂಸ್ಥಾನಕ್ಕೆ
ರಾಜರಾಗಿದ್ದರು. ಅವರು ಅಧಿಕಾರದಿಂದ ರಾಜರಾಗಿದ್ದರೂ ಶಿವಭಕ್ತರಾಗಿ,
ಜಂಗಮ ಪ್ರೇಮಿಯಾಗಿ, ಪ್ರಜಾಪ್ರಿಯರೂ ಆಗಿದ್ದರು. ವೇದ, ಉಪನಿಷತ್ತು,
ಶಾಸ್ತ್ರ, ಪುರಾಣ ಇತಿಹಾಸ ಎಲ್ಲವನ್ನು ಅಭ್ಯಾಸ ಮಾಡಿದ್ದರು. ಅವರ ಜನನ
ಮತ್ತು ಅವರ ಸಂಸಾರಕ್ಕೆ ಸಂಭಂದ ಪಟ್ಟ ಯಾವ ವಿಚಾರವೂ ಅಷ್ಟು ಖಚಿತ-
ವಾಗಿ ತಿಳಿದು ಬಂದಿಲ್ಲ. ಬಹಳ ದಿನಗಳಿಂದ ಅವರ ಗುರುಗಳ ಜೊತೆಯಲ್ಲಿ
ಪುಣ್ಯ ಕ್ಷೇತ್ರಗಳಿಗೆ ಹೋಗಿ ದರ್ಶನ ಪಡೆಯ ಬೇಕೆಂಬ ಅವರ ಮಹದಾಶೆ ರಾಜ್ಯಾ-
ಡಳಿತದಿಂದ ರಾಜ್ಯಾ ವ್ಯಾಮೋಹದಿಂದ ಕೈಗೂಡಿರಲಿಲ್ಲ.

ಒಂದು ದಿನ ಸೂರ್ಯೋದಯ ವಾಗುವ ಮೊದಲು ರಾಜ ತನ್ನ ಸ್ನಾನ
ಪೂಜಾದಿಗಳನ್ನು ಮುಗಿಸಿ ದಿನದ ಪದ್ಧತಿಯಂತೆ ಉಪಹಾರ ಸ್ವೀಕರಿಸುವ
ಮೊದಲು, ಗುರುಗಳ ಪಾದ ಪೂಜೆ ಮಾಡುವುದಾಗಿ ಅವರ ಬರುವಿಕೆಯನ್ನೇ
ಕಾಯುತ್ತ ಕುಳಿತ ಗುರುಗಳನ್ನು ಕರೆಯಲು ಹೋದ ಸೇವಕ ಓಡುತ್ತ ಬಂದು
"ಗುರುಗಳು ಊರ ಹೊರಗೆ ಇದ್ದಾರೆ" ತಮ್ಮನ್ನೇ ಅಲ್ಲಿಗೆ ಕರೆಯುತ್ತಿದ್ದಾರೆ
ಎಂದು ಬಿನ್ನವಿಸಿ ಕೊಂಡನು. ರಾಜನು ಗಾಬರಿ ಗೊಂಡು ಗುರುಗಳಿದ್ದಲ್ಲಿಗೆ
ಹೋದಾಗ ಅವರು ಒಂದು ಮರವನ್ನು ಗಟ್ಟಿಯಾಗಿ ತೆಕ್ಕೆಯಲ್ಲಿ ಹಿಡಿದು ನಿಂತಿ-
ದ್ದರು. ಆಶ್ಚರ್ಯ ಚಕಿತನಾದ ರಾಜ ಹತ್ತಿರ ಹೋಗಿ "ಗುರುಗಳೆ ಪಾದ
ಪೂಜೆಯ ಸಮಯವಾಯಿತು ಅರಮನೆಗೆ ಬನ್ನಿ" ಎಂದ ಅದಕ್ಕೆ ಅವರು "ಬರೋಣ
ವೆಂದರೆ ಈ ಮರ ನನ್ನನ್ನು ಹಿಡಿದು ಬಿಟ್ಟಿದೆ" ಬಿಡಲೊಲ್ಲದು ಹೇಗೆ ಬರಲಿ
ಎಂದು ಕೇಳಿದರು. ಗುರುಗಳೆ ವಿನೋದ ಮಾಡುತ್ತಿದ್ದೀರಾ! ಮರ ನಿಮ್ಮನ್ನು



ಹಿಡಿದು ಕೊಂಡಿಲ್ಲ ನೀವೆ ಮರವನ್ನು ಹಿಡಿದು ಕೊಂಡು ಹೀಗೆನ್ನುತ್ತೀರಲ್ಲ!
ಬಿಟ್ಟು ಬಿಡಿ ಅದು ನಿಮ್ಮ ಕೈಯ್ಯಲ್ಲೆ ಇದೆ ಎಂದ "ಹೇಗೆ ಬಿಡಲಪ್ಪಾ?
ಮನಸ್ಸಿದೆ ಆದರೆ ಮಾರ್ಗವಿಲ್ಲವಾಗಿದೆ ನಿನ್ನನ್ನು ಈ ನಶ್ವರ ರಾಜ್ಯ ಹಿಡಿದಿಲ್ಲವೇ?
ಹಾಗೆಯೇ ಇದೂ ನನ್ನನ್ನು ಹಿಡಿದಿದೆ" ಎನ್ನುತ್ತ ಶಿಷ್ಯನನ್ನು ಕರುಣೆಯಿಂದ
ನೋಡಿದರು.

ಅದೇ ತಡ ರಾಜನ ಮನಸ್ಸಿನಲ್ಲಿ ತಿಳಿವಿನ ಬೆಳಕು ಮೂಡಿತು. ಗುರುಗಳ
ಪಾದಕ್ಕೆ ಅಡ್ಡ ಬಿದ್ದು ಎದ್ದು "ನಡೆಯಿರಿ ಗುರುಗಳೇ ನಾನು ನಿಮ್ಮ ಹಿಂದೆ
ಹೊರಟೆ ಈ ಸಣ್ಣ ರಾಜ್ಯದಿಂದ ದೇವಾಧಿ ದೇವನ ದೊಡ್ಡ ರಾಜ್ಯಕ್ಕೆ" ಎಂದವನೆ
ತಿರುಗಿ ಅರಮನೆಗೂ ಕಾಲಿಡದೆ ಹೊರಗೆ ನಡೆದನು.

'ಧನ, ಕನಕ, ವಸ್ತ್ರ ಭೂಷಣ, ಗಂಧ ಮಾಲ್ಯ,
ವಾಹನ, ರಮ್ಯ ವಾಸ, ವನಿತಾದಿ ವಸ್ತುಗಳು
ಮನವಾರೆ ಮುಂದೆ ತೀವಿರೆ ಭೋಗಿಸುವ ಶಕ್ತಿ
ತನಗಿರ್ದೊಡೆ, ಅಂತೆ ಅವೆಲ್ಲವನು ತೃಣವೆಂದು,

ತಿಳಿದು ನಿಜಗುಣರು ರಾಜ್ಯ ಬಿಟ್ಟು ವಿರಾಗಿಗಳಾದರು. ಶಂಭುಲಿಂಗನ ಬೆಟ್ಟ-
ದಲ್ಲಿ ತಪಸ್ಸನ್ನು ಮಾಡಿ "ನಿಜಗುಣ ಶಿವಯೋಗಿ" ಎಂದು ಹೆಸರು ವಾಸಿಯಾದರು.
ಸನ್ಯಾಸ ಸ್ವೀಕಾರ ಮಾಡಿದ ಮೇಲೆ ಹಲವಾರು ಗ್ರಂಥಗಳನ್ನು ರಚಿಸಿದ್ದಾರೆ.
ಇವರು 12ನೇ ಶತಮಾನದಿಂದ ಈಚೆಗಿನವರು ಎಂಬುದು ಕೆಲವರ ವಾದ.
ಹಾಗೆಯೆ 1650 ರಲ್ಲಿ ಷಡಕ್ಷರ ಕವಿಯು 'ರಾಜಶೇಖರ ವಿಳಾಸ, ಎಂಬ
ಕಾವ್ಯದಲ್ಲಿ ನಿಜಗುಣರ ಹೆಸರು ಹೇಳಿರುವುದರಿಂದ ಅವರು 1650 ಕ್ಕಿಂತ ಹಿಂದಿ
ನವರಿರಬೇಕು. ಅವರ ಗ್ರಂಥಗಳ ಆಧಾರದ ಮೇಲೆ ವಿದ್ವಾಂಸರು ಅವರ ಕಾಲ
15ನೆಯ ಶತಮಾನ ಎಂದು ಊಹಿಸಿದ್ದಾರೆ.

ಕೊಳ್ಳೇಗಾಲದ ಪ್ರದೇಶದಲ್ಲಿರುವ ಜನರಲ್ಲಿ ಇವರ ಬಗ್ಗೆ ಅನೇಕ ಕಥೆಗಳು
ರೂಢಿಯಲ್ಲಿವೆ. ಶಂಭು ಲಿಂಗನ ಬೆಟ್ಟದಲ್ಲಿ ಇವರು ತಪಸ್ಸು ಮಾಡಿದ ಗುಡಿಯನ್ನು
ಈಗಲೂ ನೋಡಬಹುದು ಅವರು ತಮ್ಮ ಕನ್ನಡ ಗ್ರಂಥಗಳಲ್ಲಿ ಶಂಭುಲಿಂಗನ
ಹೆಸರನ್ನೇ ಸ್ಮರಿಸಿದ್ದಾರೆ. ಯೋಗ ಮಾರ್ಗದಲ್ಲಿ ಸಾಧನೆ ಮಾಡಿ ಶಿವಯೋಗಿ-
ಯಾಗಿದ್ದ ನಿಜಗುಣರ ಪವಾಡ ಕಥೆಗಳನ್ನು ಹೇಳಿಕೊಂಡು ಭಕ್ತ ಜನರು ಸಂತೋಷ
ಪಟ್ಟು ಕೊಳ್ಳುತ್ತಾರೆ. ರಾಜ್ಯವನ್ನು ದೂರೀಕರಿಸಿ ಅಲೌಕಿಕ ಆನಂದವನ್ನು
ದೇವರ ಸಾನಿಧ್ಯವನ್ನು ಪಡೆಯ ಬಯಸಿದ ನಿಜಗುಣರು ಶಂಭುಲಿಂಗನ ಬೆಟ್ಟಕ್ಕೆ
ಬಂದು ತಪಸ್ಸನ್ನಾಚರಿಸಿದರು ಹಠಯೋಗದಲ್ಲಿಯೂ, ರಾಜ ಯೋಗದಲ್ಲಿಯೂ

ಸಾಧನೆ ಮಾಡಿ ಸಿದ್ಧಿ ಪಡೆದು, ಕೊನೆಗೆ ಶಿವಯೋಗದಲ್ಲಿಯೂ ಅಖಂಡವಾಗಿ
ಸಾಧನೆ ನಡೆಸಿ ಶಿವನನ್ನು ಒಲಿಸಿ ಕೊಂಡರು. ಅದಾದ ನಂತರವೂ ಜಪ, ತಪ,
ಅನುಷ್ಠಾನಗಳನ್ನು ಮಾಡುತ್ತಾ ಬೆಟ್ಟದಲ್ಲಿಯೇ ಇದ್ದರು. ದೇವರು, ಧರ್ಮಗಳ
ಬಗ್ಗೆ ಕುತೂಹಲವುಳ್ಳವರು ಬಂದು ತಮ್ಮನ್ನು ಭೇಟಿ ಮಾಡಿದಾಗ ಅವರೊಡನೆ
ಚರ್ಚೆ ಮಾಡಿ ತಿಳಿಸಿ ಹೇಳಿ ಮಾರ್ಗದರ್ಶನ ಮಾಡುತ್ತಿದ್ದರು.

ನಿಜಗುಣರ ಜೊತೆಗೆ ಮುಪ್ಪಿನ ಷಡಕ್ಷರಿಯವರೂ ಶಂಭುಲಿಂಗನ ಬೆಟ್ಟ-
ದಲ್ಲಿಯೇ ಇದ್ದರೆಂದು ತಿಳಿದು ಬರುತ್ತದೆ. ಇಬ್ಬರೂ ತಮ್ಮ ತಪಸ್ಸಿನ ಶಕ್ತಿಯಿಂದ
ಪಡೆದ ಶಿವಜ್ಞಾನವನ್ನು ಇತರರಿಗೆ ಹಂಚುತ್ತಾ ಇದ್ದರು. ನಿಜಗುಣರು ಮುಪ್ಪಿನ
ಷಡಕ್ಷರಿಯವರ ಜೊತೆಯಲ್ಲಿ ಇದ್ದಾಗ ಹಲವಾರು ಪವಾಡಗಳನ್ನು ಮೆರೆಸಿದರೆಂದು
ಭಕ್ತರು ಹೇಳುತ್ತಾರೆ.

ಒಂದು ಸಲ ಇಬ್ಬರೂ ಕೂಡಿ ತಮ್ಮ ಗುರುಗಳ ದರ್ಶನ ಮಾಡಿಕೊಂಡು
ಬರಬೇಕೆಂದು ಹೊರಟರು. ಆಗ ವಾಹನ ಸೌಕರ್ಯ ಇಲ್ಲದ್ದರಿಂದ ಕಾಲುನಡಿಗೆ-
ಯಲ್ಲೇ ಹೊರಟರು ಅವರು ಹಾಗೆಯೇ ಪ್ರಯಾಣ ಮಾಡುತ್ತಿರುವಾಗ ದಾರಿಯಲ್ಲಿ
ವೀರಶೈವರ ಮನೆಗಳು ಸಿಕ್ಕರೆ ಮಾತ್ರ ಷಡಕ್ಷರಿಗಳು ಅಲ್ಲಿ ತಮ್ಮ ಪೂಜಾಸಾಮಗ್ರಿ
ಗಳನ್ನು ಇಳಿಸಿ ಸ್ನಾನ ಮಾಡಿ ದೇವರ ಪೂಜೆ ಮಾಡಿದ ಮೇಲೆಯೇ ಊಟ
ಮಾಡುತ್ತಿದ್ದರು. ಒಂದು ಸಲ ಅವರು ಹಳ್ಳಿಯ ಮಾರಮ್ಮನ ಗುಡಿಯಲ್ಲಿ ರಾತ್ರಿ
ಕಳೆದು ಮುಂದಿನ ಹಳ್ಳಿಯಲ್ಲಿ ಶಿವಾರ್ಚನೆಗೆ ಅವಕಾಶ ಸಿಕ್ಕೀತೆಂದು ಷಡಕ್ಷರಿಗಳು
ಭಾವಿಸಿದ್ದರು. ನಿಜಗುಣರು ಆ ಹಳ್ಳಿಯ ಕಮ್ಮಾರನ ಕುಲುಮೆಯ ಮುಂದೆ
ನಿಂತು ಭಿಕ್ಷೆ ಕೇಳಿದರು. ಅಲ್ಲಿಯ ಜನ ಅಪಹಾಸ್ಯದಿಂದ ನಕ್ಕು
" ಕಮ್ಮಾರನ ಕುಲುಮೇಲಿ ಸಿಕ್ಕುವುದು ಕಬ್ಬಿನ ರಸ ಅಲ್ಲ, ಎಂದು ನಿಜ-
ಕಬ್ಬಿಣದ ರಸ ಬೇಕೇನು ? " ಎಂದರು ಆಗಲಣ್ಣಾ ಅದನ್ನೇ ನೀಡು
ಗುಣರು ಬೊಗಸೆ ಒಡ್ಡಿದಾಗ ಅದರಲ್ಲಿ ಕಾಯ್ದ ಕಬ್ಬಿಣದ ರಸ ಸುರುವಿದರು
" ಶಿವಸಿಜ್ಜೆ " ಎಂದು ಅದನ್ನೆತ್ತಿ ಎಲ್ಲರ ಮುಂದೆಯೇ ಕುಡಿದು ಬಿಟ್ಟರು. ಆಗ
ಅಲಿದ್ದವರು ಇವರು ಯಾರೊ ಮಹಾತ್ಮರು ಎಂದು ತಿಳಿದು ಕಾಲುಗಳ ಮೇಲೆ
ಬಿದ್ದು ಕ್ಷಮೆ ಬೇಡಿದರು. ನಿಜಗುಣರು ಅವರನ್ನು ಕ್ಷಮಿಸಿ ಮುಂದೆ ನಡೆದರು

ಹೀಗೆ ಹಗಲು ರಾತ್ರಿ ಪ್ರಯಾಣ ಮಾಡುತ್ತಿರಲು ಒಮ್ಮೆ ದಾರಿ ತಪ್ಪಿ ಅರಣ್ಯಕ್ಕೆ
ಬಂದರು. ಆಗ ಅವರಿಗೆ ವಿಶ್ರಾಂತಿ ಗೃಹವಾಗಿ ದೊರೆತದ್ದು ಹುಲಿಯ ಗವಿ. ಆ
ಗವಿಯಲ್ಲಿದ್ದ ವ್ಯಾಘ್ರನನ್ನು ನೋಡಿ " ನೀನು ಹೊರಗೆ ನಿಂತು ಕಾವಲು ಮಾಡು
ನಮಗೆ ಸ್ಥಳ ಬಿಟ್ಟು ಕೊಡು " ಎಂದು ಆಜ್ಞಾಪಿಸಿದರು. ಅದು ಹೊರಗೆ ನಿಂತು



ಗವಿಯ ಕಾವಲು ಮಾಡಿತು. ಇವರಿಬ್ಬರೂ ವಿಶ್ರಾಂತಿ ತೆಗೆದು ಕೊಂಡು
ಮುನ್ನಡೆದರು.

ಇನ್ನೊಂದು ದಿನ ನಿಜಗುಣರು ಒಂದು ಫಲಭರಿತವಾದ ತೆಂಗಿನ ತೋಟಕ್ಕೆ
ಹೋಗಿ ಅಣ್ಣಾ ಬಾಯಾರಿಕೆ ಯಾಗಿದೆ. ಒಂದೆರಡು ಎಳನೀರು ಕೊಡು ಎಂದು
ತೋಟದ ಒಡೆಯನನ್ನು ಕೇಳಿದರು. ಇವರು ಯಾರೊ ದಾರಿಹೋಕರು ಇರಬಹು-
ದೆಂದು ತಿಳಿದು ಅವನು ಅಹಂಕಾರದಿಂದ " ನಮ್ಮ ತೋಟದ ಮೊದಲನೆಯ ಫಲ್ತಾನ
ನಮ್ಮ ದೇವರಿಗೆ ನೈವೇದ್ಯ ಮಾಡದ ಹೊರತು ಯಾರಿಗೂ ಕೊಡೋದಿಲ್ಲ "
ಕೆಲಸದಲ್ಲಿ ಮಗ್ನನಾದನು. ಕೂಡಲೆ ನಿಜಗುಣರು. " ಆಗಲಿ ಅಣ್ಣಾ, ಎಲ್ಲವೂ
ಶಿವಾರ್ಪಿತವಾಗಲಿ " ಎಂದು ಅಲ್ಲಿಂದ ಮುಂದೆ ನಡೆದರು. ಇತ್ತ ಆಳುಗಳು ಕಾಯಿ
ಗಳನ್ನು ಇಳಿಸಿ ಒಡೆದು ನೋಡಿದಾಗ ಅದರಲ್ಲಿ ತಿರುಳೂ ಇರಲಿಲ್ಲ ನೀರೂ ಇರಲಿಲ್ಲ
ತೋಟದವನ ಎದೆ ದಸಕ್ಕೆಂದಿತು. ಓಡುತ್ತ ನಿಜಗುಣರ ಹಿಂದೆ ಹೋಗಿ ಅವರ
ಕಾಲಮೇಲೆ ಬಿದ್ದು ಕ್ಷಮೆ ಕೇಳಿಕೊಂಡ. ನಿಜಗುಣರು ಮತ್ತೆ ಮೊದಲಿದ್ದಂತೆ ಅನು-
ಗ್ರಹಿಸಿ ಅವನ ಅತಿಥ್ಯವನ್ನು ಸ್ವೀಕರಿಸಿ ಮುಂದೆ ನಡೆದರು.

ನಿಜಗುಣದ ಈ ಪವಾಡಗಳನ್ನೆಲಾ ನೋಡಿದ ಷಡಕ್ಷರಿಗಳಿಗೆ ಸಂಶಯ ಉಂಟಾ
ಯಿತು ಇವರು ನಿಜವಾಗಿಯೂ ಶಿವಯೋಗಿಗಳೊ ಅಥವಾ ಇಂದ್ರಜಾಲ ವಿದ್ಯೆ-
ಯನ್ನು ತೋರಿಸುತ್ತಿರುವರೊ ಎಂದು. ಅದನ್ನು ಮನಸ್ಸಿನಲ್ಲಿಯೇ ಮುಚ್ಚಿಟ್ಟು
ಕೊಂಡರು. ಎಲ್ಲವನ್ನೂ ಬಲ್ಲ ನಿಜಗುಣರಿಗೆ ಷಡಕ್ಷರಿಯವರ ಮನಸ್ಸಿನ ಸಂಶಯವೂ
ತಿಳಿಯದಿರಲಿಲ್ಲ. ಕೊನೆಗೆ ಇಬ್ಬರು ಪ್ರಯಾಣವನ್ನು ಮುಗಿಸಿ ಗುರುಗಳ
ಆಶೀರ್ವಾದವನ್ನು ಪಡೆಯಲು ಬಂದರು. ಗುರುಗಳು ಇಬ್ಬರು ಶಿಷ್ಯರನ್ನು ನೋಡಿ
ಸಂತೋಷಪಟ್ಟು ಇಬ್ಬರಿಗೂ ಒಂದೊಂದು ತೆಂಗಿನ ಕಾಯಿಯನ್ನು ಆಶೀರ್ವದಿಸಿದರು.
ನಿಜಗುಣರು ಮೂಗಿನ್ನ ಹತ್ತಿರ ತಂದು ಕ್ಷಣಕಾಲ ಮೂಸಿನೋಡಿ ಹೊರಗೆ ಬಿಸಾ-
ಡಿದರು. ಷಡಕ್ಷರಿಗಳು ಸ್ನಾನ, ಶಿವಪೂಜೆಯಾದ ಮೇಲೆ ಗುರುವು ಕೊಟ್ಟ ಕಾಯಿ-
ಯನ್ನು ಸೇವಿಸಿದರು. ಆ ಮೇಲೆ ಗುರುಗಳ ಹತ್ತಿರ ಬಂದು ದಾರಿಯಲ್ಲಿ ಮಾಡಿ
ತೋರಿಸಿದ ಪವಾಡಗಳನ್ನು ಹಾಗೂ ಗುರುವಿನ ಹಸ್ತದಿಂದ ಬಂದ ಕಾಯಿಯನ್ನು ಬೀದಿಗೆ
ಬಿಸಾಡಿದರು ಎಂದು ದೂರು ಹೇಳಿದರು. ಆಗ ಗುರುಗಳು ನಗುತ್ತ ನಿಜಗುಣರನ್ನು
ಕರೆಸಿ " ನಾನು ಬೆಳಿಗ್ಗೆ ಕೊಟ್ಟ ಕಾಯಿಯನ್ನು ಎಲ್ಲಿ ಬಿಸಾಡಿದೆ ? ತಾ " ಎಂದರು.
ಹಾಗೆಯೇ ಷಡಕ್ಷರಿಗಳಿಗೂ ಹೇಳಿದರು. ಇಬ್ಬರು ಶಿಷ್ಯರ ಕಾಯಿಗಳನ್ನು ಪರೀಕ್ಷಿ-
ಸಲು ನಿಜಗುಣರ ಕಾಯಿಯಲ್ಲಿ ತಿರುಳು, ನೀರು ಏನೂ ಇರಲಿಲ್ಲ. ಬರಿಯ ಚಿಪ್ಪು
ಮಾತ್ರ. ಷಡಕ್ಷರಿಗಳ ಕಾಯಿಯಲ್ಲಿ ಇನ್ನೂ, ಸ್ವಲ್ಪ ಕೊಬ್ಬರಿ ಅಲ್ಲಿ ಇಲ್ಲಿ ಉಳಿದಿತ್ತು.
" ನಾನು ಮೂಸಿದಾಗಲೆ ಪ್ರಸಾದ ಸ್ವೀಕಾರ ಮಾಡಿದೆ " ಎಂದು ಮುಗುಳುನಗೆ

ಸೂಚಿಸಿರು ನಿಜಗುಣರು ಪರವಾಗಿ. ಇಂತಹ ಪವಾಡಗಳನ್ನು ಮಾಡಿ ತೋರಿಸುವುದರಿಂದ 'ಜನಸಾಮಾನ್ಯರ ಮನಸ್ಸಿನಲ್ಲಿ ಒಳ್ಳೆಯ ಪರಿಣಾಮ ಉಂಟಾಗಿ ಒಳ್ಳೆಯ ಮಾರ್ಗವನ್ನು ಹಿಡಿಯುತ್ತಾರೆಂಬುದನ್ನು ಷಡಕ್ಷರಿಯವರೊಂದಿಗೆ ಚರ್ಚಿಸಿದರು. ಅಗ್ನಿಯಿಂದ ಆಹಾರವನ್ನು ತಯಾರಿಸಲೂ ಬಹುದು, ಮನೆಯನ್ನು ಸುಡಲೂ ಬಹುದು ಹಾಗೆಯೆ! ಪವಾಡಗಳನ್ನು ನಿಷ್ಕಾಮಿಯಾಗಿ ಲೋಕ ಹಿತಕ್ಕಾಗಿ ಮಾತ್ರ ಉಪಯೋಗಿಸಬೇಕು ಎಂಬುದೇ ನಿಜಗುಣರ ವಾದ.

ಗುರುಗಳಿಗೆ ಶಿಷ್ಯನ ವಾದ ಬಹುವಾಗಿ ಹಿಡಿಸಿತು. ತಮ್ಮ ಶಿಷ್ಯ ಎಲ್ಲ ಯೋಗಗಳಲ್ಲಿಯೂ ಸಿದ್ಧಿ ಪಡೆದು ಮಹಾತ್ಮನಾಗಿದ್ದಾನೆ. ಆದರೆ ತಾನೊಬ್ಬನೆ ದೊಡ್ಡವನಾದರೆ ಸಾಲದು. ಲೋಕ ಕಲ್ಯಾಣಕ್ಕಾಗಿ ಶ್ರಮಿಸಬೇಕೆಂಬುದ ಗುರುಗಳ ಇಚ್ಛೆಯಾಗಿತ್ತು. ನಿನ್ನಿಂದ ಕನ್ನಡ ಜನರಿಗೆ ಬಹಳ ಉಪಕಾರವಾಗ ಬೇಕಾಗಿದೆ ನೀನು ಅನುಭಾವ ಮಾರ್ಗದಲ್ಲಿ ಪಡೆದ ಸಿದ್ಧಿಯಿಂದ ಇಂದಿನ ಮತ್ತು ಮುಂದಿನ ಜನರಿಗಾಗಿ ತಿಳಿಗನ್ನಡದಲ್ಲಿ ಗ್ರಂಥಗಳನ್ನು ಬರೆ. ದೇವರನ್ನು ಹಂಬಲಿಸುವ ಜನರಿಗೆ ನಿನ್ನ ಗ್ರಂಥಗಳು ಮಾರ್ಗದರ್ಶನವನ್ನೀಯಲಿ ಎಂದು ಆಶೀರ್ವದಿಸಿದರು.

ಸಪ್ತಋಷಿ, ಸಪ್ತಸಾಗರ, ಸಪ್ತಸ್ವರಗಳಂತೆ ನಿಜಗಣರು ಕನ್ನಡದಲ್ಲಿ ಏಳು ಗ್ರಂಥಗಳನ್ನು ರಚಿಸಿದ್ದಾರೆ.

೧ ಕೈವಲ್ಯ ಪದ್ಧತಿ ೨ ಪರಮಾನುಭವ ಬೋಧೆ ೩ ಅನುಭವಸಾರ
೪ ಪಾರಮಾರ್ಥ ಗೀತೆ ೫ ಪರಮಾರ್ಥ ಪ್ರಕಾಶಿಕೆ
೬ ವಿವೇಕ ಚಿಂತಾಮಣಿ ೭ ಅರವತ್ಮೂರು ಪುರಾತನರ ತ್ರಿವಿಧಿ.

ಜನಸಮಾನ್ಯರನ್ನು ಇವು ಆಕರ್ಷಿಸಿವೆ. ಇಂದಿಗೂ ಸಾಮಾನ್ಯ ರೈತ, ಹಳ್ಳಿಯ ಗೃಹಿಣಿ, ಭಿಕ್ಷೆಬೇಡುವವರು' ಮುಕ್ತಿ ಮಾರ್ಗ ಬಯಸುವವರು, ಸಾಧು ಸಂತರೂ, ಎಲ್ಲರೂ ನಿಜಗುಣರ ಹಾಡುಗಳನ್ನು ಹಾಡಿ ಸಂತೋಷ ಪಡುತ್ತಾರೆ.

ಅವರು ರಾಜರು, ಕವಿಗಳು, ಸಂಗೀತ ವಿಶಾರದರೂ, ಜ್ಞಾನಿಗಳು ಅನುಭಾವಿಗಳು, ಸಿದ್ಧ ಪುರುಷರು, ಪವಾಡ ಪುರುಷರು ಗ್ರಂಥಕಾರರೂ ಎಲ್ಲವೂ ಆಗಿದ್ದರು ಇಂತ ಎಲ್ಲಾ ತೇಜೋ ಗುಣಗಳು ಒಬ್ಬ ವ್ಯಕ್ತಿಯಲ್ಲಿಯೇ ಸಿಕ್ಕುವುದು ತುಂಬಾ ಅಪರೂಪ ಚಿಕ್ಕದೊಂದು ರಾಜ್ಯವನ್ನು ತ್ಯಾಗಮಾಡಿ ನಾಡಿನ ಜನತೆಯ ಹೃದಯ ಸಾಮ್ರಾಜ್ಯವನ್ನು ಆಳುತ್ತಿದ್ದಾರೆ. ಅವರ ಕಾವ್ಯದಲ್ಲಿ ಅಲ್ಲಲ್ಲಿ ಪ್ರಕಾಶಿಸುವ ಕೆಲವು ನುಡಿ ಮುತ್ತುಗಳನ್ನು ನೋಡಿ:



ನರ ಜನ್ಮದಿಂದಿಹ ದೊಳು ಮಿಗಿಲುಂಟೇ ?
ರಾಗದಿಂ ಬೇರಿನ್ನು ಭವ ಬೀಜ ಮುಂಟೇ ?
ವಿಮಲ ಮಾನಸದಿಂದೆ ಶುಭ ತೀರ್ಥಮುಂಟೇ ?
ಕರುಣದಿಂದತಿಶಯುವಹ ಧರ್ಮ ಮುಂಟೇ ?
ಕರಣ ವಿಜಯದಿಂದ ಕಲಿತನ ಮುಂಟೇ ?
ಕಡು ಲೋಭದಿಂದೆ ದುರ್ಗಣಮನ್ಯ ಮುಂಟೇ ?
ಅಪವಾದದಿಂ ಮರಣ ಮಿನ್ನುಂಟೇ ?

ಚಿಂತಿಸದಿರು ಸುಖದುಃಖದೆಡೆಯೊಳು
ಜಾಣನು ಲೌಕಿಕ ಪಾರಮಾರ್ಥವೆರಡನು ಮಾಣದೆ–
ಕೂಡಿನಡೆಸುತಿಹನು

ಎಲ್ಲರೊಡನೆ ವೈರವಿಲ್ಲದೆ ಕೂರ್ಪುದೆ ಚಂದಮಮ
ತಲ್ಲಣಿಸದೆ ನಿಜದಲ್ಲಿ ತಾನಿರ್ಪುದೆ ಚಂದಮಮ
ಧರೆಯೊಳತ್ಯಧಿಕ ವೆನಿಪ ಶಾಂತಿಮತವನು–
ಬೇಡುವೆನಭವಾ

ದುರಿತ ದೊಳಧಿಕವಾವುದು ? ನಿಂದೆ.
ಜೀವನ ವೆರಸಿದ ಮರಣವಾವುದು ? ಚಿಂತೆ
ಕೆಡುವ ಶರೀರದ ಸಫಲವಾವುದು ? ಪರಹಿತ
ಎಸೆವ ಜಾಗರಣ ವಾವುದು ? ಸದ್ವಿವೇಕ
ಸುಧಾರಸ ಧಾರೆಯಾವುದು ? ಮಿಗೆ ಮೃದುವಚನ
ಸದುಗತಿ ಯಾವುದು ? ಶಂಭುಲಿಂಗ.

ವೀರಶೈವ ತತ್ವಗಳನ್ನು ಪ್ರತಿಪಾದಿಸಿ ಬರೆದಿರುವ ಕೈವಲ್ಯ ಪದ್ಧತಿ ಎಂಬ ಗ್ರಂಥದ ಒಂದು ಮಂಗಳ ಪದ್ಯವನ್ನು ಕೇಳಿ.

ಜ್ಯೋತಿ ಬೆಳಗುತಿದೆ ವಿಮಲ ಪರಂಜ್ಯೋತಿ ಬೆಳಗುತಿದೆ.
ಮಾತು ಮನಂಗಳಿಂದತ್ತತ್ತ ಮೀರಿದ
ಸಾತಿಶಯದ ನಿರುಪಾಧಿಕ ನಿರ್ಮಲ.

ಕನ್ನಡನಾಡಿನ ಜನರ ಹೃದಯದಲ್ಲಿ ನಿಜಗುಣರ ನಿರ್ಮಲ ಪರಂಜ್ಯೋತಿ ಸದಾ ಬೆಳಗುತ್ತಲೇ ಇದೆ.

# ಷಟ್‌ಸ್ಥಲ ಜ್ಯೋತಿ ಚಿನ್ಮಯಾನಂದ ಚೆನ್ನಬಸವಣ್ಣ

– ಶ್ರೀ ವೀರಶೆಟ್ಟಿ ಬಾವುಗೆ, ಬಿ. ಎ. ಶಿಕ್ಷಕರು.

"ವಿಶ್ವಗುರು ಬಸವಣ್ಣ" ಹಾಗೂ ಅಕ್ಕನಾಗಮ್ಮ, ಗಂಗಾಂಬೆ, ನೀಲಾಂಬೆಯರ ಪುಣ್ಯ ಪ್ರಭಾವದ ಪ್ರಭಾವಳಿಯಲ್ಲಿ ಬೆಳೆದಾತ ಚೆನ್ನಬಸವಣ್ಣ. ಅವನೆಂಥ ಸುಕೃತ ಶಾಲಿ! ಆತನು ಕಣ್ತೆತ್ತಿ ನೋಡಿದರೆ ಎತ್ತಲೂ ಲಿಂಗ ಪೂಜೆಯನ್ನೇ, ಜಂಗಮಾರಾಧನೆಯನ್ನೇ ಕಾಣುತ್ತಿರಬೇಕು. ಆತನು ಕಿವಿಗೊಟ್ಟು ಕೇಳಿದರೆ ಶಿವಾನುಭವ ಗೋಷ್ಠಿಯನ್ನೇ ಕೇಳುತ್ತಿರಬೇಕು. ಆತನು ನಾಸಿಕ ದಿಂದವಾಸಿಸಿದರೆ ಪೂಜಾ ಪರಿಮಳ-ದ್ರವ್ಯಗಳ ಸೌರಭ ಸಂದೋಹವನ್ನೇ ವಾಸಿಸುತ್ತಿರಬೇಕು. ಆತನು ಸ್ಪರ್ಶಿಸಿದರೆ ಗುರುಗಳ, ಶರಣರು ಬಸವಣ್ಣ, ಅಕ್ಕನಾಗಮ್ಮಾದಿಗಳ ಶ್ರೀ ವಾದ ಶುಭ ಹಸ್ತಗಳನ್ನೇ ಸ್ಪರ್ಶಿಸುತ್ತಿರಬೇಕು. ಆತನು ಸೇವಿಸಿದರೆ ಶಿವಪ್ರಸಾದವನ್ನೇ ಸೇವಿಸುತ್ತಿರಬೇಕು!

ಇಂಥ ಆವರಣದಲ್ಲಿ ಬೆಳೆದ ಚೆನ್ನಬಸವಣ್ಣ ಚಿಕ್ಕಂದಿನಲ್ಲಿಯೇ ಚಿನ್ಮಯ–ಮೂರ್ತಿಯಾಗಿದ್ದರೆ ಆಶ್ಚರ್ಯವೇನು? ಅವನು ಅರಿವಿನ ಗುರುವನಾದುದು ಅಚ್ಚರಿಯಲ್ಲ-ತಿಳುವಿನ ತುತ್ತತುದಿಯನ್ನು ಮೆಟ್ಟನಿಂತುದು ಆಶ್ಚರ್ಯ ಬಸವಣ್ಣನವರೇ ಬೆರಗಾಗಿ ನುಡಿದರು. ಇಂದು ಹುಟ್ಟಿದ ಕೂಸಿಗೆ ಇಂದೇ ಜನ್ಮನವಾಯಿತ್ತಯ್ಯ! ಎಂದು 'ಬಿತ್ತದೆ ಬೆಳೆಯದೆ ಬೆಳೆದ ಹೆಬ್ಬೆಳಸಿನ ರಾಶಿಯ ನೋಡಾ! ಸುಗಂಧಬಂಧುರದಂತೆ ಹುಟ್ಟುತ್ತಲೆ ಪರಿಮಳ! ಎಂದು

ಅಷ್ಟೇಕೆ ಹಡೆದ ತಾಯಿ ಅಕ್ಕನಾಗಮ್ಮನೂ ಬೆಕ್ಕಸ ಬೆರಗಾಗಿ ನುಡಿದಳು :–

"ಎನ್ನ ಭವದ ಬಳ್ಳಿಯ ಬೇರು ಹರಿದಿತ್ತಯ್ಯ
ಸಂಗನ ಬಸವಣ್ಣನು ಒಕ್ಕುದ ಕೊಂಡೆನಾಗಿ
ಎನ್ನ ಮನದ ಕಪಟ ಹಿಂಗಿತ್ತಯ್ಯ
ಚೆನ್ನಬಸವಣ್ಣನ ಕರುಣವ ಪಡೆದೆನಾಗಿ
ಎನ್ನ ಅಂತರಂಗದ ಸಂದೆಗಸಂಶಯ ತೊಲಗಿತ್ತೆಂದು
ಬಸವಣ್ಣ ಪ್ರಿಯ ಚೆನ್ನಸಂಗಯ್ಯನಲ್ಲಿ
ಎನ್ನ ಪರಮಗುರು ಅಲ್ಲಮಪ್ರಭುದೇವರ ಶ್ರೀ ಚರಣವ ಕಂಡೆನಾಗಿ !

ಷಟಸ್ಥಲ ಚಕ್ರವರ್ತಿ ಚೆನ್ನಬಸವಣ್ಣನ ಮಹಿಮೆ ತಿಳಿಯ ಬೇಕಾದರೆ 12 ನೇ ಶತಮಾನದ 770 ಮಹಾ ಅಮರ ಗಣಗಳ ವಚನಗಳ ಆಳವಾಗಿ ಅಭ್ಯಸಿಸಿದರೆ ಮಾತ್ರ ಸಾಧ್ಯ. ನುಡಿಯಲ್ಲಿ ನಿಷ್ಠುರ. ನಡೆಯಲ್ಲಿ ಕಠೋರವೆನಿಸಿದ ಮಡಿವಾಳ



ಮಾಚಯ್ಯ ತಂದೆಯವರು ಸಹ ಚೆನ್ನಬಸವಣ್ಣನನ್ನು ಮುಕ್ತ ಕಂಠದಿಂದ-ಕೊಂಡಾಡಿದ್ದಾರೆ:

ವಾಯದ ಮಾಯದ ಸಂಭ್ರಮದೊಳಗೆ ಸಿಲುಕಿತ್ತು ನೋಡಾ ಭುವನವೆಲ್ಲ!
ಮಾಯೆಗೆ ಹೊರಗಾದ ನಿರ್ಮಾಯನ ಕಂಡೆನು !
ತಾನೆಂಬ ನುಡಿಗೆ ನಾಚಿ, ನೀನೆಂಬ ನುಡಿಗೆ ಹೇಸಿ,
ತಾನೆ ತಾನಾದ ಘನ ಮಹಿಮನು !
ಕಾಯದಲ್ಲಿ ಕುರುವಿಲ್ಲ, ಭಾವದಲ್ಲಿ ಭ್ರಮೆಯಿಲ್ಲ,
ಜ್ಞಾನ ತಾನೆಂಬ ಭೇದವಿಲ್ಲ,
ಸಾವಯನಲ್ಲ, ನಿರವಯನಲ್ಲ —
ಕಲಿದೇವರದೇವಾ, ನಿಮ್ಮಶರಣಚೆನ್ನಬಸವಣ್ಣ !

**ಸಮತೆಯ ಕರ್ಮಯೋಗಿ ಶರಣ ಸಿದ್ಧರಾಮಯ್ಯ ಸ್ತುತಿಸಿದ**

ಆಧ್ಯಾತ್ಮ ಆಧ್ಯಾತ್ಮವೆಂದೆಂಬಿರಿ; ಆಧ್ಯಾತ್ಮವಾರಿಗೆ ?
ಶ್ರೀಗುರು ಸ್ವಾಮಿ ಬಹಳಪ್ಪ ಶಿವಲಿಂಗವ ಸೂಕ್ಷ್ಮವ ಮಾಡಿ
ಕರಸ್ಥಳಕ್ಕೆ ಕೊಟ್ಟ ಬಳಿಕ ಬೇರೆ ಯೋಗ ಉಂಟೆ ?
ತನ್ನ ಹಸ್ತವ ಮಸ್ತಕದಲ್ಲಿಟ್ಟು
ವಾಯು ಪ್ರಾಣಿಗಿಯಾದ್ದುದ ಕೊಂದು ಲಿಂಗ ಪ್ರಾಣಿಯ ಮಾಡಿದ ಬಳಿಕ
ಮರಳಿ ಯೋಗವುಂಟೆ ಶಿವಯೋಗವಲ್ಲದೆ ?

ಲಿಂಗಾರ್ಚನೆಯ ಮಾಡಿ ಜಂಗಮ ಪ್ರಸಾದವ ಕೊಂಡಬಳಿಕ
ಮರಳಿ ಯೋಗಕ್ಕೆ ಬಡಂಬಡುವುದೆ ಅರಿವು ?
ಇಂತಪ್ಪವನತಿಗಳೆದು ಶುದ್ಧ ಶಿವಯೋಗಿಯ ಮಾಡಿದಾತ ಚೆನ್ನಬಸವಣ್ಣ
ಆನು ಚೆನ್ನಬಸವಣ್ಣನ ಕರುಣದಿಂದ
ಅಭ್ಯಾಸಯೋಗವನಲೆಗಳೆದು ಶಿವಯೋಗದಲ್ಲಿ ನಿತ್ಯನಾಗಿ
ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣೈಕ್ಯನೆಂಬ
ಷಡುಸ್ಥಲಕ್ಕಧಿಕಾರಿಯಾದೆ; ನಿನ್ನವರ ಸಲುಗೆಗೆ ಸಂದೆ !

**ವೈರಾಗ್ಯನಿಧಿ ಅಕ್ಕಮಹಾದೇವಿ ಅಕ್ಕರೆಯಿಂದ ಹಾಡಿದಳು**

"ಮಾಟಕೂಟವಿಲ್ಲ ಬಸವಣ್ಣಂಗೆ;
ನೋಟಕೂಟವೆಂಬುದಿಲ್ಲ ಪ್ರಭುದೇವರಿಗೆ;
ಭಾವಕೂಟವೆಂಬುದಿಲ್ಲ ಅಜಗಣ್ಣಂಗೆ;
ಸ್ನೇಹ ಕೂಟವೆಂಬುದಿಲ್ಲ ಬಾಚರಸರಿಗೆ;

ಇವರೆಲ್ಲರ ಕೂಟವೆಂಬುದಿಲ್ಲ ಚೆನ್ನಬಸವಣ್ಣಂಗೆ"

**ನಿರಂಜನ ಮೂರ್ತಿ ಪ್ರಭುದೇವರು ಸಹ:**

"ಕಿರಿಯರಾದಡೇನು ? ಹಿರಿಯರಾದಡೇನು ?
ಅರಿವಿಂಗೆ ಹಿರಿದು ಕಿರಿದುಂಟೆ ?
ಆದಿಯನಾದಿ ಇಲ್ಲದಂದು
ಅಜಾಂಡ ಬ್ರಹ್ಮಾಂಡ ಕೋಟಿಗಳು ದಯವಾಗದಂದು
ಗುಹೇಶ್ವರ ಲಿಂಗದಲ್ಲಿ ನೀನೊಬ್ಬನೆ ಮಹಾಜ್ಞಾನಿ"
ಎಂಬುದು ಕಾಣಬಂದಿತ್ತು ಕಾಣಾ, ಚೆನ್ನಬಸವಣ್ಣ!

ಹೀಗೆ ಅನೇಕ ಮಹಾಶಿವಶರಣರು ಚೆನ್ನಬಸವಣ್ಣನ ಮಹಿಮೆಯನ್ನು ಕಂಡು ತಮ್ಮ ಮೆಚ್ಚುಗೆಯ ಹೆಚ್ಚುಗೆಯನ್ನು ಬಿತ್ತಿರಿಸಿದ್ದಾರೆ.

ಈ ಹೊಗಳಿಕೆಯ ಹೊನಲಿನಲ್ಲಿ ಹರಿದು ಹೋಗಲಿಲ್ಲ ಚೆನ್ನಬಸವಣ್ಣ- "ಅಹಂಕಾರ ಅಜ್ಞಾನಿಯ ಲಕ್ಷಣ; ವಿನಯ ಜ್ಞಾನಿಯ ಲಕ್ಷಣ" ಇದು ಚೆನ್ನಬಸ- ವಣ್ಣನ ವಿನಯ ಸಂಪತ್ತು. ಮಡಿವಾಳಯ್ಯ ಮಹಿಮೆಯನ್ನು ಅಕ್ಕನ ಅಗ್ಗಳಿಕೆಯನ್ನು ಬಸವನ ಬೆಳಕನ್ನು, ಪ್ರಭುವಿನ ಪ್ರಭೆಯನ್ನು, ಸಿದ್ಧರಾಮಯ್ಯನ ಶ್ರೇಷ್ಠತೆಯನ್ನು ಸಾರಿದ ವಿನಯ ಚೆನ್ನಬಸವಣ್ಣನದು. "ಕೂಡಲ ಚೆನ್ನಸಂಗಯ್ಯನರುಹಿದರೆ ಅರಿವೆನಲ್ಲದೆ ನನಗೆ ಬೇರೆ ಸ್ವತಂತ್ರ ಜ್ಞಾನವಿಲ್ಲ ಕೇಳಯ್ಯ" ಎಂಬ ವಿಶುದ್ಧ ವಿನಯ ಅವನದು.

"ಎನ್ನಗಿಲ್ಲದ ಘನವನೇರಿಸಿ ನುಡಿದರೆ ಅದು ನಿಮ್ಮ ಲೀಲೆ;
ನಾನೆದ ಬೇಕೆನ್ನ ಬೇಡೆನ್ನೆನದಂತಿರಲಿ
ನಮ್ಮ ಶ್ರೀ ಪಾದದ ಕೃಪೆಯಿಂದ ನಿಮ್ಮ ನಿಲವನರಿದೆನು"
ಎಂದು ಬಿನ್ನವಿಸಿ ಕೊಳ್ಳುತ್ತಿದ್ದನಾ ಚಿದ್ವಿಭೂತಿ, ಚಿನ್ಮಯಮೂರ್ತಿ.

ಬಸವಣ್ಣಗುರು, ಚೆನ್ನಬಸವಣ್ಣಲಿಂಗ, ಪ್ರಭುದೇವ ಜಂಗಮ;
ಬಸವಣ್ಣಭಕ್ತಿ, ಚೆನ್ನಬಸವಣ್ಣಜ್ಞಾನ, ಪ್ರಭುದೇವ ವೈರಾಗ್ಯ;
ಬಸವಣ್ಣ ಪ್ರಣತೆ, ಚೆನ್ನಬಸವಣ್ಣ ತೈಲ, ಪ್ರಭುದೇವ ಜ್ಯೋತಿ
ಹೀಗೆಂಯಾವ ದೃಷ್ಟಿಯಿಂದ ನೋಡಿದರೂ ಈ ಮೂವರ ಸಂಬಂಧ ಮನೋಜ್ಞವಾದದು.

ಇಂಥ ದಿವ್ಯಜ್ಞಾನಿಯಾದ ಚೆನ್ನಬಸವಣ್ಣ, ಎರಡು ಪಟ್ಟು (24 ವರ್ಷ) ಮಾತ್ರ ಬದುಕಿದ್ದನೆಂದರೆ 'ಇದು ಸಾಧ್ಯವಿಲ್ಲ' ವೆನಿಸಬಹುದಲ್ಲವೆ ? ಆದರೆ ಸೋಜಿ- ಗವೆನಿಸಿದರೂ ಸತ್ಯಸಂಗತಿಯಿದು. ಬಸವಣ್ಣನವರಿಗೆ ಮೂರು ಪಟ್ಟ, ಚೆನ್ನಬಸವಣ್ಣ-



ನವರಿಗೆ ಎರಡು ಪಟ್ಟವೆಂಬುದು ಕಾಲನ. ನಾಲಿಗೆಯ ಮೇಲೆ ನೆಲೆಸಿ ನಿಂತಿರುವ ಸತ್ಯ. ಈ ಇಪ್ಪತ್ತು ವರ್ಷಗಳ ಯುವಕ 'ಅರಿವರಿತ್ತು ಮರಹು ನಷ್ಟವಾಗಿ ಸ್ವತಂತ್ರ ಶಿವಾಚಾರಿಯಾದ ಸ್ವಯಂಭು ಜ್ಞಾನಿ', ಯಾದುದು, ಮಾಯದ ಹೊಡೆಗಿಚ್ಚ ಗೆದ್ದ ' ವೀರನಾದುದು. 'ಕೂಡಲ ಚೆನ್ನಸಂಗಯ್ಯನಲ್ಲಿ ಅನುಮಿಷ ಪ್ರಭುವಿಂಗೆ ಬಸವಣ್ಣಗುರುವಾದ ಕಾರಣ ನಾನು ನಿನಗೆ ಚಿಕ್ಕ ತಮ್ಮ ಕೇಳಾ ಪ್ರಭುವೆ! ಎಂದು ಪ್ರಭು ದೇವರಿಗೆ ಹೇಳುವಷ್ಟು ಸಮರ್ಥವಾದುದು ಪವಾಡಗಳಲ್ಲಿ ಪವಾಡ.

ಬಸವಣ್ಣನವರಂತೆ 'ಸರ್ವರೂ ಸದ್ಭಕ್ತರೆಂಬೆ' ಎನ್ನುವ ದೃಷ್ಟಿ ಇವರದಲ್ಲ
"ಅಂಗದ ಮೇಲೆ ಲಿಂಗವುಳ್ಳುದೆಲ್ಲವೂ ಸಂಗಮನಾಥನೆಂಬ ಭಾವನೆ
ಬಸವಣ್ಣಂಗಾಯಿತ್ತಲ್ಲದೆ ಎನಗೆ ಆ ಭಾವವಿಲ್ಲ ನೋಡಾ !
ಲಿಂಗೈಕ್ಯ ಶರಣರ ಕಂಡರೆ ನಂಬಿನೆಚ್ಚಿ ಅವರ ಪಾದಕ್ಕೆ ಎರಗುವುದೆನ್ನ
ಮನವು"

ಎಂದು ಚೆನ್ನಬಸವಣ್ಣ ನುಡಿಯುತ್ತಾನೆ. ಇನ್ನು ಮುಂದೆ ಸಾಗಿ

ಬಟ್ಟ ಬಯಲೆಲ್ಲ ಗಟ್ಟಿಗೊಂಡಡೆ ಸ್ವರ್ಗ ಮೃತ್ಯರ ಪಾತಾಳಕ್ಕೆ ಠಾವಿ
ನ್ನೆಲ್ಲಿಯದೊ ?
ಮೇಘ ಜಲವೆಲ್ಲ ಮುತ್ತಾದಡೆ ಸಪ್ತಸಾಗರಂಗಳಿಗೆ ಉದಕವಿನ್ನೆಲ್ಲಿಯದೊ?
ಕಪ್ಪೆ ಜೀವಿ ಮನುಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾದೊಡೆ
ಮುಂದೆ ಭವದ ಬಳ್ಳಿಗೆ ಬೀಜ ವಿನ್ನೆಲ್ಲಿಯದೊ ?
ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಸಾವಿರಕ್ಕೊಬ್ಬ ಸತ್ಯ, ಲಕ್ಷಕೊಬ್ಬ
ಭಕ್ತ, ಕೋಟಿಗೊಬ್ಬ ಶರಣ"!

ಎಂದು ತನ್ನ ತೀರ್ಪನ್ನೇ ತಿಳಿಸಿ ಬಿಟ್ಟಿದ್ದಾನೆ ! ಎಂಥ ತ್ರಿಕಾಲಾಬಾಧಿತವಾದ ತೀರ್ಪು ಇದು !

ಬಸವಣ್ಣನನ್ನು ಬಿತ್ತಿದ ಬೆಳೆಯಲ್ಲಿ ಕಳೆ ಬೆಳೆದಾಗ, ಕಸ ಬೆಳೆದಾಗ, ಅದನ್ನು ಕಳೆಯಲು ಎಡೆ ಹೊಡೆಯುವ ಕಾಯಕ ಅಲ್ಲಮ - ಚೆನ್ನಬಸವರು ಮಾಡಿದರು. ಅವರು ಈ ಕಾರ್ಯ ಮಾಡದೇ ಹೋಗಿದ್ದರೆ ಬೆಳೆಗಿಂತ ಕಳೆ ಹೆಚ್ಚಾಗಿ ಕಳೆಗೆಟ್ಟು ಹೋಗುತ್ತಿದ್ದಿತು ಬಸವಣ್ಣನ ಭಕ್ತಿ ಕ್ಷೇತ್ರದ ಕೃಷಿ ಕಾಯಕ.

"ಸುರೆಯ ಮಡಕೆಗೆ ಹೊರಗೆ ಬೂದಿಯ ಹೂಸಿದರೇನು ? ಒಳಗೆ ಶುದ್ಧ- ವಾಗದನ್ನಕ್ಕರ ?" ಎಂಬುದು ಚೆನ್ನಬಸವಣ್ಣನವರ ಚಿರಂತನ ಪ್ರಶ್ನೆ. ಇವರು

ಬಹಿರ್ರಂಗಕ್ಕಿಂತ ಅಂತರಂಗಕ್ಕೆ ಹೆಚ್ಚು ಮಹತ್ವ ಕೊಟ್ಟವರು.

" ಹೊರಗನೇ ಕೊಯ್ದು ಹೊರಗನೇ ಪೂಜಿಸಿದೊಡೆ
ಪ್ರಯೋಜನವಿಲ್ಲ, ಪರಿಣಾಮವಿಲ್ಲ, ಸುಖ ದೊರೆಕೊಳ್ಳದು ನೋಡಾ !
ಅದೆಂತೆಂದೊಡೆ: ಸರ್ವ ಜೀವಂಗಳಲ್ಲಿ ಹಿಂಸೆಯ ಮಾಡದಿಪ್ಪುದೇ ಪ್ರಥಮ ಪುಷ್ಪ,
ಸರ್ವೇಂದ್ರಿಯಂಗಳಲ್ಲಿ ನಿಗ್ರಹಿಸಿಕೊಂಡಿರಬಲ್ಲಡೆ ದ್ವಿತೀಯ ಪುಷ್ಪ
ಸರ್ವಾಹಂಕಾರವ ಮರೆದು ಶಾಂತನಾಗಿರವಲ್ಲಡೆ ತೃತೀಯ ಪುಷ್ಪ
ಸರ್ವ ವ್ಯಾಪಾರವಳಿದು ನಿರ್ವ್ಯಾಪಾರಿಯಾಗಿರ ಬಲ್ಲಡೆ ಚತುರ್ಥ ಪುಷ್ಪ
ದುರ್ಭಾವ ಪ್ರಕೃತಿಯಳಿದು ಸದ್ಭಾವ ಎಡೆಗೊಂಡಿರಬಲ್ಲಡೆ ಪಂಚಮ ಪುಷ್ಪ
ಉಂಡು ಉಪವಾಸಿ ಬಳಿಸಿ ಬ್ರಹ್ಮಚಾರಿಯಾಗಿರ ಬಲ್ಲೊಡೆ ಷಷ್ಟಮ ಪುಷ್ಪ
ಅನೃತವ ಮರೆದು ಸತ್ಯವ ನುಡಿಯ ಬಲ್ಲೊಡೆ ಸಪ್ತಮ ಪುಷ್ಪ
ಸಕಲ ಪ್ರಪಂಚವಳಿದು ಶಿವಜ್ಞಾನ ಸಂಪನ್ನನಾಗಿರ ಬಲ್ಲಡೆ ಅಷ್ಟಮ ಪುಷ್ಪ
ಇಂತೀ ಅಷ್ಟಕಮಲದಲ್ಲಿ ಸಹಸ್ರ ಪೂಜೆಯ ಮಾಡಬಲ್ಲ ಶರಣರು
ನಿಮ್ಮ ಪ್ರತಿಬಿಂಬದಂತಿಪ್ಪರು ಕಾಣಾ ಕೂಡಲ ಚೆನ್ನಸಂಗಮ ದೇವಾ।

ಈ ಅಷ್ಟಕಮಲದ ಸಹಸ್ರ ಪೂಜೆ ಅದೆಷ್ಟು ಅನುಪಮವಾದುದು !
ಬಂಡಿತುಂಬ ಪತ್ರೆಯ ತಂದು ಕಂಡ ಕಂಡಲ್ಲಿ ಪೂಜೆಯ ಮಾಡುವ ಬಾಹ್ಯ ಕರ್ಮದಿಂದ ಪರಿಣಾಮವಿಲ್ಲ ವೆಂದು ಎಚ್ಚರಿಸಿದ್ದಾರೆ.

ಷಟಸ್ಥಲ ಸಿದ್ಧಾಂತಕ್ಕೆ ಸರಿಯಾದ ತಳಹದಿಯನ್ನು ಹಾಕಿ ಷಟಸ್ಥಲ ಚಕ್ರವರ್ತಿ ಎನಿಸಿಕೊಂಡರು ಚೆನ್ನಬಸವಣ್ಣನವರು. ಸಂಪತ್ತುಗಳಲ್ಲಿ ಸದಾಚಾರ ಸಂಪತ್ತು ಬಹಳ ಮಹತ್ತ್ವವಾದದೆಂದು ತೋರಿಸಿದವರೆಂದರೆ ಇವರೊಬ್ಬರೆ.

ಸದಾಚಾರಿಯಾದೊಡೆ - - - ಒಬ್ಬರಿಗೊಬ್ಬರು ಶರಣೆಂಬುದೇ ಸರ್ವ ತೀರ್ಥ;
ಆ ಭಕ್ತನ ದೇಹವೇ ತ್ರಿಕೂಟದ ಶಿವಾಲಯ, ವಿನಯವೇ ಅಗ್ಗವಣಿ
ಸಜ್ಜನವೇ ಮಜ್ಜನ ಸದಾನಂದ ಹಿತವೇ ಲಿಂಗಪೂಜೆ ಸತ್ಯವೇ ಅಡ್ಡಣಿಗೆ
ಸಮತೆ ಹರಿವಾಣ, ಮನವೇ ಮೀಸಲು, ಗುರುವು ಲಿಂಗವಾರೋಗಣೆಯ
ಮಾಡುತಲಿರಲು ಹರುಷವೇ ಹಸ್ತಮಜ್ಜನ, ಪ್ರೀತಿಯೇ ಕರ್ಪೂರ ವೀರ್ಯ,
ಕಲಿತನವೇ ಜಾಗಟೆ, ವಿರಕ್ತಿ ಮದ್ದಳೆ."

ಹೀಗೆ ದೇಹದಲ್ಲಿ ನಡೆಯುವ ವ್ಯಾಪಾರಗಳನ್ನೇ ಶುದ್ಧೀಕರಿಸಿ ಉದಾತ್ತೀಕರಿಸಿ 'ಒಡಲುಗೊಂಡು ಒಡಲು ವಿಡಿಯದೆ, ಒಡಲಿಲ್ಲದ ನಿಜವ ಬೆರಿಸುವ' ಭೇದವನ್ನು ತಿಳಿಸುವವರಲ್ಲಿ ಗಣ್ಯನೆನಿಸಿದ್ದಾರೆ ಚೆನ್ನಬಸವಣ್ಣ.



ಕರಣ ಹಸುಗೆ ಮಿಶ್ರಾರ್ಪಣ ಪದಮಂತ್ರಗೋಪ್ಯ, ಮಂತ್ರಗೋಪ್ಯ, ಕಾಲಜ್ಞಾನಗಳನ್ನು ಬರೆದು ಅದಕ್ಕೆ ಶಾಶ್ವತವಾದ ಸ್ವರೂಪವನ್ನು ತಂದು ಕೊಟ್ಟಿದ್ದಾರೆ. ಇಂದಿಗೂ ಷಟಸ್ಥಲ ರಹಸ್ಯವನ್ನು ಅರಿಯಲೆಳಸುವವರಿಗೆ ಇವು ಕೈದೀವಿಗೆಗಳು.
ಅರೆ ಭಕ್ತರಾದವರ ನೆರೆಯಲ್ಲಿರಲಾಗದು ! ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಆದರೆ ಸಾಧಕರ ಬಗ್ಗೆ ಸಹಾನುಭೂತಿ ಸಾಕಷ್ಟಿದೆ ಅವರಲ್ಲಿ.

" ನಿಧಾನವನಗಿವೆನೆಂದು ಹೋದರೆ ವಿಘ್ನಬಪ್ಪುದು ಮಾಬುದೇ ಅಯ್ಯ ?
ಸದಾಶಿವನ ಪೂಜಿಸುವೆನೆಂದು ಹೋದರೆ ತುರುಬಿ ಹಿಡಿವವಯ್ಯ
ಸಕಲ ವಿಪತ್ತುಗಳು ! ಎಡೆ ಭಂಗವಿಲ್ಲದೆ ನಿಲ್ಲಬಲ್ಲಡೆ ಸದಮಲ
ಸುಖವೀವ ನಮ್ಮ ಕೂಡಲ ಚೆನ್ನಸಂಗಮದೇವ" ಎಂದು ಸಾಧಕರಿಗೆ
ಧೈರ್ಯವಿತ್ತನಾತ, ಲೋಕದ ಲೋಗರ ಮಾತಿಗೆ ಕಿವಿಗೊಡಬೇಡಿರಿ,
ಅವರಿಗೆ ಶರಣರ ನಡೆ ಅರ್ಥವಾಗದು. ಅವರನ್ನು ಮೆಚ್ಚಿಸುವದು
ಆಗದ ಮಾತು.

ಲೋಕದಿಚ್ಛೆಗೆ ನುಡಿಯದೆ ಲಿಂಗದ ನುಡಿಯಾಗಿ ಲಿಂಗಮೆಚ್ಚಿ ಅಹುದೆನ್ನುವಂತೆ ನುಡಿಯಿರಿ; ಲೋಕದಿಚ್ಛೆಗೆ ನಡೆಯದೆ ಸ್ವತಂತ್ರ ಶೀಲರಾಗಿ ಶಿವಾಚಾರ ಪಥದಲ್ಲಿ ಮುನ್ನಡೆಯಿರಿ ಎಂದು ಭಕ್ತಾದಿಗಳಿಗೆ ಕಿವಿಮಾತನ್ನೇ ಹೇಳಿದ್ದಾರೆ.

ತಾನಳಿದು ತಾನುಳಿದು ಸಹಜ ನಿಜಪದವಿಯಲ್ಲಿ ಕೂಡಲ ಚೆನ್ನಸಂಗಯ್ಯನಲ್ಲಿ ತಾನು ತಾನಾದ ಚೆನ್ನಬಸವಣ್ಣನನ್ನು 'ಷಟಸ್ಥಲ' ಚಕ್ರವರ್ತಿಯೆಂದು ಯುಗ ಜಗವ ಮೀರಿದ ಶರಣನೆಂದು ಗೌರವಿಸಿದರು ಶರಣರು. ಆರಾದರೂ ನಿಮ್ಮ ನೆನೆವರಯ್ಯ ನಾನಿಮ್ಮ ನೆನೆವನಲ್ಲ ಅದೇನು ಕಾರಣವೆಂದರೆ ನಿಮ್ಮ ನೆನೆವ ಮನ ನೀವೆಯಾದಿರಾಗಿ! ಎಂದು ಸಾರುವ ಆತನ ನಿಲುವನ್ನು ಯಾರು ಬಣ್ಣಿಸಬಲ್ಲರು ?

ಶರಣರ ಯೋಗಕ್ಷೇಮದ ಹೊಣೆಯನ್ನು ಹೊತ್ತಿದ ಚೆನ್ನಬಸವಣ್ಣ ಕಲ್ಯಾಣ ಕ್ರಾಂತಿವಾದ ನಂತರ ಶಾಂತಿ-ಮೈತ್ರಿ-ಸೈರಣೆ-ಸಂಯಮಗಳ ಸಂದೇಶವನಿತ್ತಿದ್ದ ಚನ್ನ ಬಸವಣ್ಣನೇ ಶಸ್ತ್ರಧಾರಿಯಾಗಿ ಶರಣರ ಸೇನಾಪತಿಯಾದ ಶರಣರನ್ನು ಕೂಡಿಕೊಂಡು ಸಾವಿನ ಬಾಯಿಯಿಂದ ಹೊರಬೀಳುವಂತೆ ಕಲ್ಯಾಣದಿಂದ ಹೊರಬಿದ್ದ. ಶಿವಾಚಾರಿಗಳು ಗಣಾಚಾರಿಗಳಾದರು ಶಿವಗಣದ ರಕ್ಷಣೆಗಾಗಿ! ನಂತರ ಅಳಿದುಳಿದ ಶರಣರು ಉಳಿವೆಯತ್ತ ಹೋದರು.

ಒಂದು ಮಾತು ಮಾತ್ರ ನಿಜ. ಅಂದು ಅವರು ಆತ್ಮಯಜ್ಞದಲ್ಲಿ ಧುಮುಕಿ ಧರ್ಮಕ್ರಾಂತಿಯನ್ನು ಸಮಾಜ ಕ್ರಾಂತಿಯನ್ನು ಕಾಯಕ ಕ್ರಾಂತಿಯನ್ನು ಸಾಹಿತ್ಯ

ಕ್ರಾಂತಿಯನ್ನು ಮಾಡದೆ ಹೋಗಿದ್ದರೆ ನಾವಿಂದು ಇರುವ ಸ್ಥಿತಿಯಲ್ಲಿ ಇರುತ್ತಿರಲಿಲ್ಲ. ಇನ್ನು ಕಾಡುಸ್ಥಿತಿಯಲ್ಲಿ ಇರುತ್ತಿದ್ದೆವು. ನಮ್ಮನ್ನು ಶತಮಾನಗಳ ಹಿಂದೆಯೇ ಮನುಷ್ಯರನ್ನಾಗಿ ಮಾಡಿದ ಮಹಾತ್ಮರವರು.

ಕಾಮ ಬೇಡ ಪರಸ್ತ್ರೀಯರಲ್ಲಿ। ಕ್ರೋಧ ಬೇಡ ಗುರುವಿನಲ್ಲಿ॥
ಲೋಭ ಬೇಡ ತನುಮನದಲ್ಲಿ। ಮೋಹ ಬೇಡ ಸಂಸಾರದಲ್ಲಿ॥
ಮದ ಬೇಡ ಶಿವಭಕ್ತರಲ್ಲಿ। ಮತ್ಸರ ಬೇಡ ಸಕಲ ಪ್ರಾಣಿಗಳಲ್ಲಿ॥
ಇಂತಿ ಷಡ್ವಿಧಗುಣಂಗಳನರಿದು। ಮರೆಯಬಲ್ಲಡೆ ಆತನೆ ಸದ್ಭಕ್ತ ಕಾಣಾ॥
ಕೂಡಲ ಚೆನ್ನಸಂಗಮ ದೇವಾ।

ಇಂತಹ ಅರಿವಿನ ಆಣಿಮುತ್ತುಗಳನ್ನು ಸರಿಮಾಡಿ ಕನ್ನಡಿಗರ ಕೊರಳಿಗೆ ತೊಡಿಸಿ ಹೋದ ಷಟಸ್ಥಲ ಜ್ಯೋತಿ ಚಿನ್ಮಯಾನಂದ ಚೆನ್ನಬಸವಣ್ಣ.

ಇಂದು ನಾವೆಲ್ಲರೂ ಅವರ ನುಡಿಮುತ್ತುಗಳು ಅರಿತು ಜೀವನದಲ್ಲಿ ಅಳವಡಿಸಿ ಕೊಳ್ಳೋಣ ಎಂದು ಜಯಂತಿ ಸಂಭ್ರಮದಲ್ಲಿ ಶಪಥ ಮಾಡೋಣ.

ಜೈ ಬಸವೇಶ!

( ಈ ಲೇಖನಕ್ಕೆ ಅನೇಕ ಮಹಾಶಿವಶರಣರ ಗ್ರಂಥಗಳ ಪುಷ್ಟಿಇದೆ. )

# ಗ್ರಾಮಾಂತರ ಬಸವ ಜಯಂತಿ

-ಹೆಚ್. ವಿ. ವೀರಭದ್ರಯ್ಯ

ಆತ್ಮೀಯ ಶರಣ ಬಂಧು,

ಮಲೆನಾಡಿನ ಐತಿಹಾಸಿಕ ಪ್ರಸಿದ್ಧವಾದ ಕೆಂಚಮ್ಮನ ಹೊಸಕೋಟೆಯ ಹೆಸರು ಕೇಳಿದ್ದೀಯಲ್ಲವೆ? ತುಂಬು ನಿಸರ್ಗದ ರಾಮಣೀಯಕ ಗ್ರಾಮ. ಸುತ್ತ ಮುತ್ತ ತರುಮರಾದಿಗಳು. ಮುಗ್ಧ ಬಂಧುಗಳು. ಬಸವತತ್ವಾಭಿಮಾನಿಗಳು ಅಕ್ಕ ಪಕ್ಕದಲ್ಲಿ ವಿರಕ್ತ ಮಠಗಳ ಪರಿಸರ. ಅಲ್ಲಿ ಬಸವಜಯಂತಿ ಆಚರಣೆ-ದಿನಾಂಕ-5. 5. 87

ಪರಮ ಪೂಜ್ಯರನ್ನು ಭಕ್ತಿ ಉತ್ಸಾಹಗಳಿಂದ ಸ್ವಾಗತಿಸಿದರು. ಅಪಾರವಾದ ಜನಸಂದಣಿ. ರಸ್ತೆ ಸಂಪರ್ಕನಿಂತು ಹೋಗುವಷ್ಟು ಜನಸಾಗರ. ಎಲ್ಲೊ ಲ್ಲೂ ಸಂಭ್ರಮ, ಸಡಗರ. ಪರಮ ಪೂಜ್ಯರಿಗೆ ಹೆಜ್ಜೆಗೊಮ್ಮೆ ಇಡುಗಾಯಿ, ಕಲಶಾರತಿ ಸುಮಂಗಲಿಯರ ಮಧುರ ಕಂಠದಿಂದ ವಚನಗಾಯನ. ಕಣ್ಮಣಿಸ ಸುಂದರ ನೋಟ.

ಕಾಲಕ್ಕೆ ಸರಿಯಾಗಿ ಸಮಾರಂಭ ಪ್ರಾರಂಭವಾಯಿತು. ವಿದ್ವಾಂಸರಿಂದ ಬಸವತತ್ವಗಳ ಬಗ್ಗೆ ವಿದ್ವತ್ಪೂರ್ಣವಾದ ಉಪನ್ಯಾಸಗಳು. ವಚನ ಗಾಯನ ಸುಧೆ ಮಲೆನಾಡಿನಲ್ಲಿ ಮರುಧ್ವನಿತವಾಯಿತು. ಕೊಂಬುಕಹಳೆಗಳ ಪ್ರದರ್ಶನ ಮಧ್ಯೆ. ನೋಡಿದವರ ಎದೆಭಕ್ತಿ ತಾಂಡವವಾಡಿತು.

ಬಸವಣ್ಣ ಒಂದು ಜಾತಿಗೆ ಸೀಮಿತನಾದವನಲ್ಲ. ಮಹಾತ್ಮರಿಗೆ ಕುಲಸೀಮೆ ಗಳಿರುವುದಿಲ್ಲ. ಅವರು ಕುಲಸೀಮೆಗಳನ್ನು ಗೆದ್ದ ನಿಸ್ಸೀಮ ಚೆಲುವರು. ಹುಟ್ಟುವಾಗ ಯಾವುದೋ ಒಂದು ಸಮಾಜದಲ್ಲಿ ಹುಟ್ಟಿದರೂ ಕೊನೆಗೆ ಲೋಕತಾರಕ ವ್ಯಕ್ತಿಗಳಾಗಿ ಲೋಕಹಿತಕ್ಕಾಗಿ ಬಾಳುತ್ತಾರೆ. ಭಗವಾನ್ ಬಸವಣ್ಣನವರು ಈ ಜಗತ್ತು ಕಂಡ ಅತ್ಯಂತ ಅಪೂರ್ವ ಚೇತನ. ಅವರು ಮಾಡಿದ,ನೀಡಿದ, ಸುಧಾರಣೆ,- ಸಂದೇಶ ಅಮೂಲ್ಯವಾದುವು ಹಾಗೆಯೇ. ಸಾರ್ವಕಾಲಿಕವಾದುವು. ಆಚರಣೆ-ಯಿಂದ ದೂರವಾದುದ್ಯಾವುದನ್ನು ಬಸವಣ್ಣನವರು ಹೇಳಲಿಲ್ಲ. ವೈಯಕ್ತಿಕವಾಗಿ ತಾವು ಆಚರಿಸಿದ್ದನ್ನು, ಅನುಭವಕ್ಕೆ ಬಂದದ್ದನ್ನು ಮಾತ್ರ ಪ್ರಕಟಮಾಡಿದರು. ಅಂತರಂಗದ ಎಲ್ಲ ಭಾವನೆಗಳಿಗೆ ಇಂಬುಕೊಟ್ಟರು ಅಭಿವ್ಯಕ್ತಿಸಿದರು. 'ದಯೆ' ಎಂಬುದನ್ನು ಕೇವಲ ಮಾನವ ವರ್ಗಕ್ಕೆ ಮಾತ್ರ ಸೀಮಿತಮಾಡದೆ, ಸಕಲ ಜೀವರಿಗೆ ಲೇಸನೆ" ಕೋರಿದರು. ಅವರದು ಸಾಂತಕರುಣ ನೋಟ. ಎದೆಗಪ್ಪಿಕೊಳ್ಳುವ ಮನೋಧರ್ಮ. ಲೋಕಜೀವನದ ಏಳು - ಬೀಳುಗಳನ್ನು ಕಂಡಾಗ



ಪ್ರತಿಕ್ರಿಯಿಸಿದರಾದರೂ, ಸ್ಪಂದಿಸಿದರೂ, ಲೋಕವನ್ನು ಮಂಗಳ ಮಾರ್ಗದಲ್ಲಿ ನಡೆಸಿದರು. ಅಸ್ಪೃಶ್ಯತೆಯನ್ನು ಅವರು ವಿರೋಧಿಸಿದ್ದಷ್ಟೇ ಅಲ್ಲ, ಅದಕ್ಕಂಟಿದ್ದ ಕೊಳಕು ರೋಗವನ್ನು ಬೇರು ಸಹಿತ ಕಿತ್ತರು. ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರೆಲ್ಲರನು ಒಂದೇ ಎಂಬೆ ಎಂದರು. ಅವರು ಬೋಧಿಸಿದ ಸಪ್ತ ಶೀಲಗಳು ಸರ್ವಜನಾಂಗದ, ಸರ್ವಕಾಲದ ಅಮೃತ ಫಲಗಳಾಗಿವೆ. - "ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ತನ್ನ ಬಣ್ಣಿಸ ಬೇಡ, ಇದಿರ ಹಳಿಯಲು ಬೇಡ, ಮುನಿಯ ಬೇಡ, ಅನ್ಯರಿಗೆ ಅಸಹ್ಯ ಪಡಬೇಡ" - ಎಂಬ ಈ ಏಳು ಶೀಲ ಜೀವನದ ಅಮೂಲ್ಯ ರತ್ನಾಭರಣಗಳು. ದೇವನ ಕಾರುಣ್ಯ ಸಂಪಾದನೆಗೆ ಇವು ಸಪ್ತ ಸೋಪಾನಗಳು. ಕಾಯಕ ಮತ್ತು ದಾಸೋಹ-ಬಸವಾದಿ ಶರಣರು ಜಗತ್ತಿಗೇ ನೀಡಿದ ತಾರಕ ಸಂದೇಶ. ದುಡಿಮೆಯಿಲ್ಲದೆ ಇಂದು ರಾಷ್ಟ್ರ ಬಡವಾಗುತ್ತಿದೆ. ರಾಷ್ಟ್ರನಾಯಕರಿಗೆ ದೂರದರ್ಶನ ಅಗತ್ಯ. ಯಾವುದೇ ರಾಷ್ಟ್ರ ಸಾಲತಂದು ಸುಖನೀಡಿ ಕಲ್ಯಾಣವನ್ನುಂಟು ಮಾಡುವುದು ಸೂಕ್ತವಲ್ಲ. ಜನಾಂಗಕ್ಕೆ ದುಡಿಮೆಯನ್ನು ಕಲಿಸಬೇಕು ದುಡಿಯದೆ ಉಣ್ಣುವ ಹಕ್ಕು ನಿಸರ್ಗ ವಿರೋಧಿಯಾದುದು ಅಲ್ಲದೆ ದುಡಿದು ತಂದುದರಲ್ಲಿ ಸಮಾಜದ ಪಾಲು ಇರತ್ತದೆ. ಅದನ್ನು ನೀಡಬೇಕು ಸಮಾಜಕ್ಕೆ ಹಾಗೆ ನೀಡುವಲ್ಲಿ ಅರ್ಪಣಾ ಭಾವವರಳುತ್ತದೆ. ಅಹಂಕಾರ ನಿರಸನವಾಗುತ್ತದೆ, ಕ್ರಮಕ್ರಮೇಣ ತನ್ನದಲ್ಲ ಎಲ್ಲವೂ ದೇವನದು ಎಂಬ ಭಾವನೆಯೊಂದಿಗೆ ಕೂಡಲ ಸಂಗಮ ಒಲಿಸಲು ಬಂದ. ಪ್ರಸಾದ ಕಾಯವ ಕೆಡಿಸದಂತೆ ಬಾಳುವ ಕಲೆಯನ್ನು ಅರಿಯುವಂತಾಗುತ್ತದೆ. ಲೋಕ ಜೀವನ ತಿರಸ್ಕರಣೀಯವಲ್ಲ, ಅದೂ ದೇವನ ಸೃಷ್ಟಿಯೇ? "ಮರ್ತ್ಯವೆಂಬುದು ಕರ್ತಾರನ ಕಮ್ಮಟ" ಗೌರವದ ಸಾಧನ ಕ್ಷೇತ್ರ. ಇಲ್ಲಿ ಸಲ್ಲುವಂತೆ ಅಲ್ಲಿಯೂ ಸಲ್ಲಬೇಕು. ಬಸವಣ್ಣನವರು ಬೋಧಿಸಿದ್ದು ಇದನ್ನು ಸಂಸಾರ ಶಿವಯೋಗದ ಮಾರ್ಗವಾಗಬೇಕು ಈ ಮನೆ 'ಮಹಾಮನೆ' ಯಾಗಬೇಕು ಎಂದರು - ಎಂಬುದಾಗಿ ಪರಮ ಪೂಜ್ಯ ಶ್ರೀ ಶ್ರೀಗಳು ಅಧ್ಯಕ್ಷ ಪೀಠದಿಂದ ಆಶೀರ್ವಚನ ನೀಡಿದರು.

ರಾತ್ರಿ ಹತ್ತು ಘಂಟೆಗೆ 'ಜಗಜ್ಯೋತಿ ಬಸವೇಶ್ವರ' ನಾಟಕ ಪ್ರಾರಂಭ-ವಾಯಿತು. ಹಿಮದ ವಾತಾವರಣದಲ್ಲಿಯೂ ಜನಸಾಗರ ನಾಟಕವನ್ನು ಬೆಳ್ಳ ಬೆಳಗಿನವರೆಗೆ ಕೂತವರು ಏಳದೆ ನೋಡಿ ತಣಿದರು. ಮಲೆನಾಡಿನ ಗ್ರಾಮೀಣ ಬಂಧುಗಳಿಗೆ ಅದೊಂದು ಯಕ್ಷಲೋಕವಾಗಿ ಕಾಣಬಂದಿತು. 'ಬಾಳ್ಳ, ವಿನ ಬಂಧುಗಳು ಪ್ರತಿ ವರ್ಷ ಮಲೆನಾಡಿನಲ್ಲಿ ಈ ನಾಟಕ ಆಡಿಸಬೇಕು ಎಂದು ಪರಮ ಪೂಜ್ಯರಲ್ಲಿ ಅರಿಕೆ ಮಾಡಿಕೊಳ್ಳುತ್ತಿದ್ದುದನ್ನು ವರದಿಗಾರ ಕಂಡಾಗ ಶ್ರೀ ಶ್ರೀಗಳವರ ಯೋಜನೆ ಪರಿಣಾಮವನ್ನುಂಟು ಮಾಡುತ್ತಿದೆ ಎನ್ನಿಸಿತು.

## ಸಿದ್ಧಗಂಗಾ ಹಳೆಯ ವಿದ್ಯಾರ್ಥಿ ಸಂಘದ "ಆಜೀವ ಸದಸ್ಯತ್ವದ" ಪಟ್ಟಿ.

ಶ್ರೀಯುತರಾದ :—

271 ರೇವಣ್ಣಸಿದ್ಧಯ್ಯ, ನಿರ್ವಾಹಕ ಕೆ. ಎಸ್. ಆರ್. ಟಿ. ಸಿ, ತುಮಕೂರು ಡಿಪೊ, ತುಮಕೂರು.

272 ಟಿ. ಗೋಪಾಲಯ್ಯ, ದೂರವಾಣಿ ಅಧೀಕ್ಷಕರು, ದೂರವಾಣಿ ಕೇಂದ್ರ ಕುಣಿಗಲ್.

273 ಕೆ. ಎಸ್. ದಕ್ಷಿಣಾಮೂರ್ತಿ, ವ್ಯಾಪಾರಿಗಳು. ಕಂಬಾಳು ಮತ್ತು ಅಂಚೆ, ನೆಲಮಂಗಲ ತಾ||

274 ರುದ್ರಾರಾಧ್ಯ ಉಪಾಧ್ಯಾಯರು, ಪುರುಷನಹಳ್ಳಿ ಮತ್ತು ಅಂಚೆ, ದೊಡ್ಡಬಳ್ಳಾಪುರ ತಾ|| ಬೆಂಗಳೂರು ಜಿಲ್ಲೆ.

275 ಕೆ. ಎಸ್. ಸಿದ್ದಗಂಗಯ್ಯ, ನಂ. 218 9 ನೇ ಬ್ಲಾಕ್, ಲೋಕೋಪಯೋಗಿ ನಿವೇಶನ, ವಿಲ್‌ಸನ್ ಗಾರ್ಡನ್, ಬೆಂಗಳೂರು

276 ಡಿ. ಎನ್. ಶಿವಶಂಕರಯ್ಯ, ಹೆಚ್. ಎಂ. ಟಿ ಗಡಿಯಾರ-ಕಾರ್ಖಾನೆ, ತುಮಕೂರು.

277 ಕೆ. ಜಿ. ತಿಮ್ಮಪ್ಪ, ಸ್ಟೇಷನ್ ಮಾಸ್ಟರ್. ಬಾಣವಾರ ರೈಲ್ವೆ ನಿಲ್ದಾಣ, ಬಾಣವಾರ, ಅರಸೀಕೆರೆ ತಾ||

278 ಎನ್. ವೀರಪ್ಪ, ಬಾಗೇವಾಡಿ ಮತ್ತು ಅಂಚೆ ಹೊಳೇನರಸಿಪುರ ತಾ||

279 ಚನ್ನಬಸವಯ್ಯ, ರೆಸಿಡೆನ್ಸಿ ರಸ್ತೆ ಪೋಸ್ಟ್ ಬಾಕ್ಸ್ ನಂ. 2619, ಬೆಂಗಳೂರು- 560025

280 ಶ್ರೀ ಶ್ರೀ. ಶಿವಾಚಾರ್ಯ ಸ್ವಾಮಿಗಳು, ಹೊನ್ನಗವಿಮಠ ಶಿವಗಂಗಾ ಅಂಚೆ, ನೆಲಮಂಗಲ ತಾ||

281 ಹೆಚ್. ಈಶ್ವರಯ್ಯ ಆರೋಗ್ಯ ಇಲಾಖೆ, ನಂ. 247, ಶಿವನಹಳ್ಳಿ, ಬೆಂಗಳೂರು - 560010.

282 ಎಸ್. ಚಂದ್ರಶೇಖರಯ್ಯ, ನಂ. 695 / 85 6 ನೇ ಮುಖ್ಯ ರಸ್ತೆ ವಿಜಯನಗರ, ಬೆಂಗಳೂರು - 560040.

(ಮುಂದುವರಿಯುತ್ತದೆ)

## 'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರಬಳಗ.

ಸರ್ವಶ್ರೀ :—

1230 ಪಿ. ಬಿ. ಅಮ್ಮಣ್ಣ ಬಿ. ಇ, ಎ|| ಇಂಜಿನಿಯರ್, W/M ಡಿವಿಜನ್ ಭೀಮರಾಯನ ಗುಡಿ - 585287.

1231 ಸಿ. ಎಸ್. ಆಂಟನ್ ಬಿ. ಇ, ಎ|| ಇಂಜಿನಿಯರ್, ಬಡಾವಣೆ. ಬಾಗಲುಕೋಟೆ. 587100, ಬಿಜಾಪುರ ಜಿಲ್ಲೆ.

1232 ಬಿ. ಮಲ್ಲಿಕಾರ್ಜುನ ಬಿ. ಇ, ಎ|| ಇಂಜಿನಿಯರ್ P. W. D ಸಬ್‌ಡಿವಿಜನ್, ಸಿಂಧನೂರು—584128 ರಾಯಚೂರು ಜಿಲ್ಲಾ

1233 ಎಂ. ಶ್ರೀನಿವಾಸ, ಕನ್ನಡ ಪಂಡಿತ್, ಜಯ ಭಾರತಿ-ಜೂನಿಯರ್ ಕಾಲೇಜು, ಬ್ಯಾಲ್ಯ . 572163 ಮಧುಗಿರಿ ತಾಲ್ಲೂಕು ತುಮಕೂರು ಜಿಲ್ಲಾ.

1234 ಕೆ. ಎನ್. ಸ್ವಾಮಿ, ಕನ್ನಡ ಪಂಡಿತ್, ಸರ್ಕಾರಿ ಬಾಲಕರ ಪ್ರೌಢಶಾಲೆ, ದಾವಣಗೆರೆ.

1235 ಬಿ. ಸಿ. ಶಿವಾನಂದ, ಕಂಟ್ರಾಕ್ಟರ್ ಮತ್ತು ಇಂಜನಿಯರ್, ನಂ. 874, 38ನೇ ಕ್ರಾಸ್, 8ನೇಮುಖ್ಯರಸ್ತೆ, ಟಿ. ಬ್ಲಾಕ್, ಜಯನಗರ, ಬೆಂಗಳೂರು . 560011.

1236 ಪಿ. ಶಿವಕುಮಾರ್, ಸಂಗೀತ ಅಧ್ಯಾಪಕರು, ಶಿವ ಪ್ರಸನ್ನ ನಿಲಯ 6 ನೇ ಕ್ರಾಸ್, ಸರ್ಕಾರಿ ಕಾಲೇಜು ಬಡಾವಣೆ, ತುಮಕೂರು.

1237 ಸಿದ್ಧಪ್ಪ S/o ಪುಟ್ಟಪ್ಪ, ಪ್ರಸನ್ನಹಳ್ಳಿ, ದೊಡ್ಡಸಣ್ಣೆ ಅಂಚೆ, ದೇವನಹಳ್ಳಿ ತಾ|| ಬೆಂಗಳೂರು ಜಿಲ್ಲೆ.

1238 ಸೋತಪ್ಪ, ಅಧ್ಯಕ್ಷರು, ಎಲಿಯೂರು ಅಂಚೆ, ದೇವನಹಳ್ಳಿ ತಾ|| ಬೆಂಗಳೂರು ಜಿಲ್ಲೆ.

1239 ಆರ್. ಜಿ. ಆಂಜನಪ್ಪ ಅಧ್ಯಕ್ಷರು, ಸಹಕಾರಿ ಸಂಘ, ರೆಡ್ಡಿಹಳ್ಳಿ-ಮತ್ತು ಅಂಚೆ ಸೂಲಿಬೆಲೆ ಮಾರ್ಗ, ಬೆಂಗಳೂರು ಜಿಲ್ಲೆ.

1240 ಕುಮಾರಿ ರಶ್ಮಿ D/o ಎಂ. ಎಸ್. ಪ್ರೇಮಚಂದ್, ನಂ. 129/2 ಜೀವನಭೀಮಾನಗರ್, ಬೆಂಗಳೂರು ಜಿಲ್ಲೆ.

(ಮುಂದುವರಿಯುತ್ತದೆ)

# ಪ್ರಕಟಣೆ

## ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ 1988

### ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ – 572104

* ಈ ವಸ್ತು ಪ್ರದರ್ಶನ ಶ್ರೀ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯವರ ಜಾತ್ರೆಯ ಅಂಗವಾಗಿ ಮಹಾಶಿವರಾತ್ರಿಯ ಸಂದರ್ಭದಲ್ಲಿ 5 - 2 - 1988 ಪ್ರಾರಂಭವಾಗುತ್ತದೆ. ಮುಕ್ತಾಯ 19 - 2 - 1988.

* ಶ್ರೀ ಮಠವು ಬೆಂಗಳೂರು ಬಾಂಬೆ ರಾಷ್ಟ್ರೀಯ ಹೆದ್ದಾರಿಗೆ, ಕ್ಯಾತ್ಸಂದ್ರ ಮತ್ತು ತುಮಕೂರು ರೈಲ್ವೆಸ್ಟೇಷನ್‌ಗಳಿಗೆ ಸಮೀಪವಾಗಿದ್ದು, ಉತ್ತಮ ಸಕಾಲಿಕ ಸಾರಿಗೆ ಸೌಕರ್ಯವನ್ನು ಹೊಂದಿದೆ.

* ಕಳೆದ 24 ವರ್ಷಗಳಿಂದ ಸ್ವಾತಂತ್ರ್ಯಾನಂತರ ರಾಷ್ಟ್ರದ ಪ್ರಗತಿಯ ಮುನ್ನಡೆಯನ್ನು '-ಸಿದ್ಧಗಂಗಾ' ವಸ್ತು ಪ್ರದರ್ಶನವು ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ **ಡಾ|| ಶ್ರೀ ಶ್ರೀ ಶಿವಕುಮಾರ – ಮಹಾ ಸ್ವಾಮಿಗಳವರ** ನೇತೃತ್ವದಲ್ಲಿ ಪ್ರತಿಬಿಂಬಿಸುತ್ತಾ ಬಂದಿದೆ.

* ರಾಜ್ಯ ಮತ್ತು ಕೇಂದ್ರ ಸರ್ಕಾರದ ವಿವಿಧ ಇಲಾಖೆಗಳ ಮಳಿಗೆಗಳು ಭಾಗವಹಿಸುವುದರಿಂದ ಜಾತ್ರೆಗೆ ಭೇಟಿ ಕೊಡುವ ಲಕ್ಷಾಂತರ ಜನರಿಗೆ ವಸ್ತು ಪ್ರದರ್ಶನ ಮಾರ್ಗದರ್ಶನ ನೀಡುತ್ತದೆ.

* ಶ್ರೀ ಮಠ ತುಮಕೂರು ನಗರಕ್ಕೆ ಸಮೀಪದಲ್ಲಿರುವುದರಿಂದ ಸ್ಥಳೀಯ ಕೈಗಾರಿಕೋದ್ಯಮಿಗಳಿಗೆ ಮಳಿಗೆಗಳನ್ನು ತೆರೆಯುವುದರ ಮೂಲಕ ಪ್ರಚಾರ ಮಾಧ್ಯಮಕ್ಕೆ ಸದವಕಾಶ.

* ಗ್ರಾಮಾಂತರ ಪ್ರದೇಶದಲ್ಲಿ ಗ್ರಾಮೀಣ ಜನತೆಗೆ ಜ್ಞಾನದಾಸೋಹ ಮಾಡುತ್ತಿರುವ ಏಕೈಕ ವಸ್ತುಪ್ರದರ್ಶನ.

* ಪ್ರತಿದಿನ ಸಂಜೆ ವೈವಿಧ್ಯಮಯವಾದ ಮನರಂಜಿಸುವ ಸಾಂಸ್ಕೃತಿಕ ಮತ್ತು ಸಾಮಾಜಿಕ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿದೆ.

* ಬೋಧಪ್ರದವಾದ ಉತ್ತಮ ಕಾರ್ಯಕ್ರಮಗಳನ್ನು ಕೊಡಲಿಚ್ಛಿಸುವವರು ಸಮಿತಿಯವರನ್ನು ಸಂಪರ್ಕಿಸಲು ಕೋರುತ್ತೇವೆ.

* ರೈತ ಬಾಂಧವರಿಗೆ ಈ ವಸ್ತು ಪ್ರದರ್ಶನ ವರಪ್ರದವಾಗಿದೆ.

**ಕಾರ್ಯದರ್ಶಿಗಳು,**
**ವಸ್ತು ಪ್ರದರ್ಶನ ಸಮಿತಿ,**

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ